R.N.I. No. KARBIL/2001/47147
REG. No. RNP/KA/BGS/2202/2014-16
Licensed to post without prepayment
Licence No. WPP-297

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಫೆಬ್ರವರಿ ೧೩, ೨೦೧೪ (ಮಾಘ ೨೪, ಶಕ ವರ್ಷ ೧೯೩೫)<br>Bangalore, Thursday, February 13, 2014 (Magha 24, Shaka Varsha 1935) | ಸಂಚಿಕೆ ೭<br>Issue 7 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗದ 2013–14ನೇ ಸಾಲಿನ ವಾರ್ಷಿಕ ಕ್ರಿಯಾ ಯೋಜನೆಯ ಬಗ್ಗೆ.

**ಓದಲಾಗಿದೆ:** 1. ಕಾರ್ಯದರ್ಶಿ, ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗ ಇವರ ಪತ್ರ ಸಂಖ್ಯೆ : ಬಸೀಪ್ರಮಂ/ಚಿ/ಕ್ರಿಯೋ/2013–14/257–2, ದಿನಾಂಕ 03–10–2013.

**ಪ್ರಸ್ತಾವನೆ:**

ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗಕ್ಕೆ 2013–14ನೇ ಸಾಲಿನಲ್ಲಿ ಒದಗಿಸಿರುವ ಅನುದಾನ ಮತ್ತು ಮಂಡಳಿಯಲ್ಲಿ ದಿನಾಂಕ 01–04–2013ರಲ್ಲಿದ್ದ ಶಿಲ್ಕಿನ ವಿವರಗಳು ಈ ಕೆಳಕಂಡಂತಿದೆ :

(ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಆರಂಭಿಕ ಶಿಲ್ಕು (01–04–2013 ರಲ್ಲಿದ್ದಂತೆ) (₹ ಲಕ್ಷಗಳಲ್ಲಿ) | 2013–14ನೇ ಸಾಲಿನಲ್ಲಿ ಒದಗಿಸಿರುವ ಅನುದಾನ (₹ ಲಕ್ಷಗಳಲ್ಲಿ) | ಲಭ್ಯವಾಗುವ ಅನುದಾನ (₹ ಲಕ್ಷಗಳಲ್ಲಿ) |
|---|---|---|---|---|
| 1 | 2515–00–103–0–03–101 (ಸಹಾಯಾನುದಾನ) | 71.66 | 100.00 | 171.66 |
| 2 | 2515–00–103–0–03–132 (ಬಂಡವಾಳ ವೆಚ್ಚ) | 201.23 | 903.00 | 1104.23 |
| 3 | 2515–00–103–0–03–422 (ವಿಶೇಷ ಘಟಕ ಯೋಜನೆ) | 349.96 | 532.00 | 881.96 |
| 4 | 2515–00–103–0–03–423 (ಗಿರಿಜನ ಉಪಯೋಜನೆ) | 99.53 | 195.00 | 294.53 |
| 5 | ನಬಾರ್ಡ್ | 51.10 | – | 51.10 |
| | **ಒಟ್ಟು** | **773.48** | **1730.00** | **2503.48** |

ಮೇಲೆ ಓದಲಾದ ಪತ್ರದಲ್ಲಿ, ಕಾರ್ಯದರ್ಶಿ, ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗ ಇವರು 2013–14ನೇ ಸಾಲಿನಲ್ಲಿ ಲಭ್ಯವಾಗುವ ರೂ. 2503.48 ಲಕ್ಷಗಳಿಗೆ ವಾರ್ಷಿಕ ಕ್ರಿಯಾ ಯೋಜನೆಯನ್ನು ತಯಾರಿಸಿ ದಿನಾಂಕ 04–09–2013 ರಂದು ನಡೆದ ಮಂಡಳಿಯ ಸರ್ವಸದಸ್ಯರ ಸಭೆಯಲ್ಲಿ ಅನುಮೋದನೆ ಪಡೆದುಕೊಂಡಿದ್ದು, ಸದರಿ ವಾರ್ಷಿಕ ಕ್ರಿಯಾ ಯೋಜನೆಗೆ ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮಂಡಳಿಯ 2013–14ನೇ ಮಂಡಳಿಯ ಕ್ರಿಯಾ ಯೋಜನೆಗೆ ಅನುಮೋದನೆ ನೀಡಲು ನಿರ್ಣಯಿಸಿದೆ. ಅಂತೆಯೇ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 47 ಪಿಟಿಪಿ 2013, ಬೆಂಗಳೂರು, ದಿನಾಂಕ: 11–11–2013**

ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗದ 2013–14ನೇ ಸಾಲಿನ ₹ 2503.48 ಲಕ್ಷಗಳ ಈ ಕೆಳಕಂಡ ವಾರ್ಷಿಕ ಕ್ರಿಯಾ ಯೋಜನೆಗೆ, ಮಂಡಳಿಯಲ್ಲಿ ಕೈಗೊಳ್ಳುವ ಎಲ್ಲಾ ಹೊಸ ಕಾಮಗಾರಿಗಳ ಕ್ರಿಯಾ ಯೋಜನೆ ಪಟ್ಟಿಯನ್ನು ಕೂಡಲೇ ಸಲ್ಲಿಸುವ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

| ಕ್ರಮ ಸಂಖ್ಯೆ | ವಿವರಗಳು | ಅನುದಾನ (₹ ಲಕ್ಷಗಳಲ್ಲಿ) |
|---|---|---|
| **1** | **2** | **3** |
| **ಸಹಾಯಾನುದಾನ** | | |
| 1 | ಆಡಳಿತಾತ್ಮಕ ವೆಚ್ಚ | 171.66 |
| **ಬಂಡವಾಳ ವೆಚ್ಚ** | | |
| 1 | ಮುಂದುವರಿದ ಕಾಮಗಾರಿಗಳಿಗೆ | 422.01 |
| 2 | ಹೊಸ ಕಾಮಗಾರಿಗಳಿಗೆ | 569.35 |
| 3 | ಸರ್ಕಾರದ ವಿವೇಚನಾ ನಿಧಿ | 45.15 |
| 4 | ಅಧ್ಯಕ್ಷರ ವಿವೇಚನಾ ನಿಧಿ | 45.15 |
| 5 | ಮಂಡಳಿಯ ವಿವೇಚನಾ ನಿಧಿ | 22.58 |
| | **ಒಟ್ಟು** | **1104.23** |
| **ವಿಶೇಷ ಘಟಕ ಯೋಜನೆ** | | |
| 1 | ಮುಂದುವರಿದ ಕಾಮಗಾರಿಗಳಿಗೆ | 32.56 |
| 2 | ಹೊಸ ಕಾಮಗಾರಿಗಳಿಗೆ | 782.90 |
| 3 | ಸರ್ಕಾರದ ವಿವೇಚನಾ ನಿಧಿ | 26.60 |
| 4 | ಅಧ್ಯಕ್ಷರ ವಿವೇಚನಾ ನಿಧಿ | 26.60 |
| 5 | ಮಂಡಳಿಯ ವಿವೇಚನಾ ನಿಧಿ | 13.30 |
| | **ಒಟ್ಟು** | **881.96** |
| **ಗಿರಿಜನ ಉಪಯೋಜನೆ** | | |
| 1 | ಮುಂದುವರಿದ ಕಾಮಗಾರಿಗಳಿಗೆ | – |
| 2 | ಹೊಸ ಕಾಮಗಾರಿಗಳಿಗೆ | 270.15 |
| 3 | ಸರ್ಕಾರದ ವಿವೇಚನಾ ನಿಧಿ | 9.75 |
| 4 | ಅಧ್ಯಕ್ಷರ ವಿವೇಚನಾ ನಿಧಿ | 9.75 |
| 5 | ಮಂಡಳಿಯ ವಿವೇಚನಾ ನಿಧಿ | 4.88 |
| | **ಒಟ್ಟು** | **294.53** |
| **ನಬಾರ್ಡ್** | | |
| 1 | ಮುಂದುವರಿದ ಕಾಮಗಾರಿಗಳಿಗೆ | 51.10 |
| | **ಒಟ್ಟು ಮೊತ್ತ** | **2503.48** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಉಮಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

**PR. 1214**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾದ 2013–14ನೇ ಸಾಲಿನ ಕ್ರಿಯಾ ಯೋಜನೆ ಅನುಮೋದಿಸುವ ಕುರಿತು.

**ಓದಲಾಗಿದೆ:** ಕಾರ್ಯದರ್ಶಿ, ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇವರ ಪತ್ರ ಸಂಖ್ಯೆ : ಹೈಕಮಂ/ಯೋ–2/1/2013–14/684, ದಿನಾಂಕ 21–10–2013.

**ಪ್ರಸ್ತಾವನೆ:**

ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾಕ್ಕೆ 2013–14ನೇ ಸಾಲಿನಲ್ಲಿ ಒದಗಿಸಿರುವ ಅನುದಾನ ಮತ್ತು ಮಂಡಳಿಯಲ್ಲಿ ದಿನಾಂಕ 01–04–2013ರಲ್ಲಿದ್ದ ಆರಂಭಿಕ ಶಿಲ್ಕಿನ ವಿವರಗಳು ಈ ಕೆಳಕಂಡಂತಿದೆ :

(ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಆರಂಭಿಕ ಶಿಲ್ಕು (01–04–2013 ರಲ್ಲಿದ್ದಂತೆ) | 2013–14ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನ | ಲಭ್ಯವಾಗುವ ಒಟ್ಟು ಅನುದಾನ |
|---|---|---|---|---|
| 1 | 2515–00–103–0–01–101 (ಸಹಾಯಾನುದಾನ) | 26.74 | 130.00 | 156.74 |
| 2 | 2515–00–103–0–01–132 (ಬಂಡವಾಳ ವೆಚ್ಚ) | 1219.23 | 3655.00 | 4874.23 |
| 3 | 2515–00–103–0–01–422 (ವಿಶೇಷ ಘಟಕ ಯೋಜನೆ) | 608.64 | 2008.00 | 2616.64 |
| 4 | 2515–00–103–0–01–423 (ಗಿರಿಜನ ಉಪಯೋಜನೆ) | 188.56 | 737.00 | 925.56 |
| | ಒಟ್ಟು | **2043.17** | **6530.00** | **8573.17** |

ಮೇಲೆ ಓದಲಾದ ಪತ್ರದಲ್ಲಿ, ಕಾರ್ಯದರ್ಶಿ, ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇವರು 2013–14ನೇ ಸಾಲಿನಲ್ಲಿ ಲಭ್ಯವಾಗುವ ₹ 8573.17 ಲಕ್ಷಗಳಿಗೆ ವಾರ್ಷಿಕ ಕ್ರಿಯಾ ಯೋಜನೆಯನ್ನು ತಯಾರಿಸಿ ದಿನಾಂಕ 21–08–2013 ರಂದು ನಡೆದ ಮಂಡಳಿಯ ಸರ್ವಸದಸ್ಯರ ಸಭೆಯಲ್ಲಿ ಅನುಮೋದನೆ ಪಡೆದುಕೊಂಡಿದ್ದು, ಸದರಿ ವಾರ್ಷಿಕ ಕ್ರಿಯಾ ಯೋಜನೆಗೆ ಸರ್ಕಾರದ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮಂಡಳಿಯ 2013–14ನೇ ಮಂಡಳಿಯ ಕ್ರಿಯಾ ಯೋಜನೆಗೆ ಅನುಮೋದನೆ ನೀಡಲು ನಿರ್ಣಯಿಸಿದೆ. ಅಂತೆಯೇ ಈ ಆದೇಶ.

### ಸರ್ಕಾರದ ಆದೇಶ ಸಂಖ್ಯೆ: ಯೋಇ 23 ಹೈಕಮಂ 2013, ಬೆಂಗಳೂರು, ದಿನಾಂಕ: 22ನೇ ನವೆಂಬರ್ 2013

ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾದ 2013–14ನೇ ಸಾಲಿನ ಒಟ್ಟು ರೂ. 8573.17 ಲಕ್ಷಗಳ ಈ ಕೆಳಕಂಡ ವಾರ್ಷಿಕ ಕ್ರಿಯಾ ಯೋಜನೆಗೆ, ಮಂಡಳಿಯಲ್ಲಿ ಕೈಗೊಳ್ಳುವ ಎಲ್ಲಾ ಹೊಸ ಕಾಮಗಾರಿಗಳ ಪಟ್ಟಿಯನ್ನು ಕೂಡಲೇ ಸಲ್ಲಿಸುವ ಮತ್ತು 2014–15ನೇ ಸಾಲಿನ ಅನುದಾನವನ್ನು ಹೊಸ ಕಾಮಗಾರಿಗಳಿಗೆ ಮಾತ್ರ ಉಪಯೋಗಿಸಿಕೊಳ್ಳುವ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

| ಕ್ರಮ ಸಂಖ್ಯೆ | ವಿವರಗಳು | (ರೂ. ಲಕ್ಷಗಳಲ್ಲಿ) |
|---|---|---|
| **1** | **2** | **3** |
| **ಸಹಾಯಾನುದಾನ** | | |
| 1 | ಆಡಳಿತಾತ್ಮಕ ವೆಚ್ಚ | 156.74 |
| **ಬಂಡವಾಳ ವೆಚ್ಚ** | | |
| 1 | ಮುಂದುವರಿದ ಕಾಮಗಾರಿಗಳಿಗೆ | 2912.35 |
| 2 | ಹೊಸ ಕಾಮಗಾರಿಗಳಿಗೆ | 1505.00 |
| 3 | ಸರ್ಕಾರದ ವಿವೇಚನಾ ನಿಧಿ | 182.75 |
| 4 | ಅಧ್ಯಕ್ಷರ ವಿವೇಚನಾ ನಿಧಿ | 182.75 |
| 5 | ಮಂಡಳಿಯ ವಿವೇಚನಾ ನಿಧಿ | 91.38 |
| | ಒಟ್ಟು | **4874.23** |

| ಕ್ರಮ ಸಂಖ್ಯೆ | ವಿವರಗಳು | (ರೂ. ಲಕ್ಷಗಳಲ್ಲಿ) |
|---|---|---|
| 1 | 2 | 3 |
| **ವಿಶೇಷ ಘಟಕ ಯೋಜನೆ** | | |
| 1 | ಮುಂದುವರಿದ ಕಾಮಗಾರಿಗಳಿಗೆ | 872.05 |
| 2 | ಹೊಸ ಕಾಮಗಾರಿಗಳಿಗೆ | 1493.59 |
| 3 | ಸರ್ಕಾರದ ವಿವೇಚನಾ ನಿಧಿ | 100.40 |
| 4 | ಅಧ್ಯಕ್ಷರ ವಿವೇಚನಾ ನಿಧಿ | 100.40 |
| 5 | ಮಂಡಳಿಯ ವಿವೇಚನಾ ನಿಧಿ | 50.20 |
| | **ಒಟ್ಟು** | **2616.64** |
| **ಗಿರಿಜನ ಉಪಯೋಜನೆ** | | |
| 1 | ಮುಂದುವರಿದ ಕಾಮಗಾರಿಗಳಿಗೆ | 344.57 |
| 2 | ಹೊಸ ಕಾಮಗಾರಿಗಳಿಗೆ | 488.86 |
| 3 | ಸರ್ಕಾರದ ವಿವೇಚನಾ ನಿಧಿ | 36.85 |
| 4 | ಅಧ್ಯಕ್ಷರ ವಿವೇಚನಾ ನಿಧಿ | 36.85 |
| 5 | ಮಂಡಳಿಯ ವಿವೇಚನಾ ನಿಧಿ | 18.43 |
| | **ಒಟ್ಟು** | **925.56** |
| | **ಒಟ್ಟು ಮೊತ್ತ** | **8573.17** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಉಮಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

**PR. 1253**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಇ. ರಾಮಕೃಷ್ಣಪ್ಪ, ವಜಾಗೊಂಡಿರುವ ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರನ್ನು ಮಾನ್ಯ ಕೆ.ಎ.ಟಿ.ಯ ತಡೆಯಾಜ್ಞೆಯನ್ವಯ ಸೇವೆಗೆ ತೆಗೆದುಕೊಳ್ಳುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 704 ಸಅಸೇ 2013, ಬೆಂಗಳೂರು, ದಿನಾಂಕ: 14ನೇ ನವೆಂಬರ್ 2013**

ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 54 ಎಸ್ಇಎನ್ 2005, ದಿನಾಂಕ 27–8–2013ರಲ್ಲಿ ಶ್ರೀ ಇ. ರಾಮಕೃಷ್ಣಪ್ಪ, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರು ಈ ಹಿಂದೆ ನಿಯೋಜನೆ ಮೇಲೆ ತಹಶೀಲ್ದಾರ್, ಶ್ರೀನಿವಾಸಪುರ ತಾಲ್ಲೂಕು ಈ ಹುದ್ದೆಯಲ್ಲಿ ದಿನಾಂಕ 16.03.2001ರಿಂದ ದಿನಾಂಕ 10–03–2004ರವರೆಗೆ ಕರ್ತವ್ಯ ನಿರ್ವಹಿಸಿದ್ದ ಅವಧಿಯಲ್ಲಿ ಸರ್ಕಾರಿ ಜಮೀನನ್ನು ಕಾನೂನು ಬಾಹಿರವಾಗಿ ಪರಭಾರೆ/ಮಂಜೂರಾತಿ ಮಾಡಿಕೊಟ್ಟಿರುವುದಕ್ಕೆ ಸಂಬಂಧಿಸಿದಂತೆ ಮಾಡಲಾದ 5 ಆರೋಪಗಳು ಮತ್ತು ಅರಣ್ಯ ಇಲಾಖೆಗೆ ಸೇರಿದ ಸುಮಾರು 134 ಎಕರೆ 18 ಗುಂಟೆ ಜಮೀನನ್ನು ನಿಯಮ ಬಾಹಿರವಾಗಿ ಅನಧಿಕೃತ ಸಾಗುವಳಿ ಸಕ್ರಮೀಕರಣ ಯೋಜನೆಯಡಿ ಮಂಜೂರು ಮಾಡಿರುವುದಕ್ಕೆ ಸಂಬಂಧಿಸಿದಂತೆ ಮಾಡಲಾದ ಒಂದು ಆರೋಪವೂ ಸೇರಿದಂತೆ ಒಟ್ಟಾರೆ ಇವರ ವಿರುದ್ಧ ಮಾಡಲಾದ ಎಲ್ಲಾ ಆರು ಆರೋಪಗಳು ಈ ಸಂಬಂಧದಲ್ಲಿ ನಡೆಸಲಾಗಿರುವ ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(viii) ರನ್ವಯ ಶ್ರೀ ಇ. ರಾಮಕೃಷ್ಣಪ್ಪ, ಅಧೀನ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಲಾಗಿದೆ.

ಶ್ರೀ ಇ. ರಾಮಕೃಷ್ಣಪ್ಪ, ಇವರು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 54 ಎಸ್ಇಎನ್ 2005, ದಿನಾಂಕ 27–8–2013ನ್ನು ಪ್ರಶ್ನಿಸಿ ಮಾನ್ಯ ಕೆ.ಎ.ಟಿ. ಯಲ್ಲಿ 5454/2013ನ್ನು ಸಲ್ಲಿಸಿದ್ದು, ಸದರಿ ಅರ್ಜಿಯಲ್ಲಿ ಮಾನ್ಯ ಕೆ.ಎ.ಟಿ.ಯು ದಿನಾಂಕ 30–8–2013 ರಂದು ಶ್ರೀ ಇ. ರಾಮಕೃಷ್ಣಪ್ಪ ಇವರನ್ನು ವಜಾಗೊಳಿಸಿರುವ ಆದೇಶಕ್ಕೆ ಎರಡು ತಿಂಗಳುಗಳವರೆಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಡೆಯಾಜ್ಞೆಯನ್ನು ನೀಡಿರುತ್ತದೆ. ಪುನಃ ಈ ತಡೆಯಾಜ್ಞೆಯನ್ನು ಮಾನ್ಯ ಕೆ.ಎ.ಟಿ.ಯು ದಿನಾಂಕ 29–10–2013ರ ಆದೇಶದಲ್ಲಿ ನಾಲ್ಕು ವಾರಗಳ ಅವಧಿಗೆ ವಿಸ್ತರಿಸಿರುತ್ತದೆ.

ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಮಧ್ಯಂತರ ಅದೇಶವನ್ನು ಅನುಷ್ಠಾನಗೊಳಿಸುವ ಬಗ್ಗೆ ಪರಿಶೀಲಿಸಲಾಗಿದ್ದು, ಸದರಿ ಅಧಿಕಾರಿಯವರನ್ನು ಸೇವೆಗೆ ತೆಗೆದುಕೊಳ್ಳುವ ಬಗ್ಗೆ ಸಚಿವ ಸಂಪುಟದ ಅನುಮೋದನೆಯನ್ನು ಕಾಯ್ದಿರಿಸಿ, ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶವನ್ನು ಜಾರಿಗೊಳಿಸಲು ಸರ್ಕಾರವು ತೀರ್ಮಾನಿಸಿದೆ.

ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ತಡೆಯಾಜ್ಞೆಯನ್ವಯ ಶ್ರೀ ಇ. ರಾಮಕೃಷ್ಣಪ್ಪ, ವಜಾಗೊಂಡಿರುವ ಕರ್ನಾಟಕ ಸರ್ಕಾರ ಸಚಿವಾಲಯದ ಅಧೀನ ಕಾರ್ಯದರ್ಶಿ ಇವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಗೆ ತೆಗೆದುಕೊಳ್ಳಲಾಗಿದೆ.

ಈ ಆದೇಶವು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನೀಡಿರುವ ತಡೆಯಾಜ್ಞೆಯು ತೆರವುಗೊಳ್ಳುವವರೆಗೆ ಅಥವಾ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಮುಂದಿನ ಆದೇಶಕ್ಕೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಸೇವೆಗಳು–6)

**PR. 01**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ 2011ರ ಪರಿಣಾಮಕಾರಿ ಅನುಷ್ಠಾನಕ್ಕೆ ಸಕಾಲ ಮಂಡಳಿಗೆ ಹೆಚ್ಚುವರಿ ಸಿಬ್ಬಂದಿಗಳನ್ನು ಸೃಜನೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 28 ಇಕಾಅ 2012, ದಿನಾಂಕ 28–03–2012.
2. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 119 ನಾಸೇಖಾ 2012, ದಿನಾಂಕ 29–11–2012.
3. ಸರ್ಕಾರದ ಟಿಪ್ಪಣಿ ಸಂಖ್ಯೆ : ಸಿಆಸುಇ 184 ನಾಸೇಖಾ 2013, ದಿನಾಂಕ 26–07–2013.
4. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 812/686/ವೆಚ್ಚ–12/2013, ದಿನಾಂಕ 18–11–2013.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ರಾಜ್ಯ ಸರ್ಕಾರವು 11 ಇಲಾಖೆಗಳ ಮುಖಾಂತರ 151 ಕಾಲಮಿತಿ ಸೇವೆಗಳನ್ನು ಕರ್ನಾಟಕ ನಾಗರೀಕರಿಗೆ ಒದಗಿಸಲು ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011 ಅನ್ನು ದಿನಾಂಕ 02–04–2012 ರಿಂದ ರಾಜ್ಯಾದ್ಯಂತ ಅನುಷ್ಠಾನಗೊಳಿಸಲಾಗಿದೆ.

ಮೇಲೆ ಓದಲಾದ (2)ರ ಅಧಿಸೂಚನೆಯಲ್ಲಿ "ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ, 2011" ರ ಸಂಬಂಧ ಸರ್ಕಾರದ ಕ್ರಮಾಂಕ ಸಿಆಸುಇ 119 ನಾಸೇಖಾ 2012, ದಿನಾಂಕ 26–10–2012ರ ಅಧಿಸೂಚನೆ–1ರ ತಿದ್ದುಪಡಿ ಅಧಿಸೂಚನೆಯಲ್ಲಿ ಸೇರಿಸಿರುವ ಹೆಚ್ಚುವರಿ ಸೇವೆಗಳಲ್ಲಿ 6 ಇಲಾಖೆಗಳ 93 ಹೆಚ್ಚುವರಿ ಸೇವೆಗಳನ್ನು ಹಾಗೂ ಸಿಬ್ಬಂದಿ ಕಲ್ಯಾಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ 21 ಸೇವೆಗಳನ್ನು ದಿನಾಂಕ 3ನೇ ಡಿಸೆಂಬರ್ 2012 ರಿಂದ ರಾಜ್ಯದಾದ್ಯಂತ ಜಾರಿಗೆ ಬರುವಂತೆ ಅಧಿಸೂಚನೆಯನ್ನು ಹೊರಡಿಸಲಾಗಿದೆ. ಮುಂದುವರೆದು, "ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ, 2011" ನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ರಾಜ್ಯಾದ್ಯಂತ ಸರ್ಕಾರದ 44 ಇಲಾಖೆ/ಸಂಸ್ಥೆಗಳ 419 ಸೇವೆಗಳನ್ನು ಸಕಾಲದಡಿಯಲ್ಲಿ ತರಲಾಗಿದೆ.

ಮೇಲೆ ಓದಲಾದ (3)ರ ಟಿಪ್ಪಣಿಯಲ್ಲಿ ರಾಜ್ಯದ ಎಲ್ಲಾ ತಾಲ್ಲೂಕುಗಳಿಂದಲೂ ಸಕಾಲ ದೂರುಗಳ ಜೊತೆಗೆ "ಸಕಾಲೇತರ ದೂರುಗಳು ಅಧಿಕವಾಗಿ ಬರುತ್ತಿದ್ದು, ಆನ್‌ಲೈನ್ ಮೂಲಕ ಸೇವೆಗಳನ್ನು ನೀಡುವ ವ್ಯವಸ್ಥೆ ಮಾಡಲಾಗಿದೆ. ಅಲ್ಲದೆ ಇ–ಜನಸ್ಪಂದನ ಪೋರ್ಟಲ್‌ನಲ್ಲಿ ವಿಲೇವಾರಿ ವ್ಯವಸ್ಥೆಯನ್ನು ಮಾಡಲಾಗಿದೆ. ಇದರೊಂದಿಗೆ ಮಾನ್ಯ ಮುಖ್ಯಮಂತ್ರಿಗಳ ಜನತಾ ದರ್ಶನ, ರಾಜ್ಯ ಸರ್ಕಾರಿ ಕಾರ್ಯಕ್ರಮಗಳ ಬಲವರ್ಧನಾ ಸಮಿತಿ/ಜಾಡೀಕರಣ (ಟ್ರಾಕಿಂಗ್) ಹಾಗೂ ಸರಳೀಕರಣ ಸಮಿತಿಯನ್ನು ರಚಿಸಲಾಗಿದೆ. ಈ ಎಲ್ಲಾ ಕಾರ್ಯಗಳನ್ನು ಸಕಾಲ ಮಂಡಳಿಯಿಂದ ನಡೆಸಲಾಗುತ್ತಿದೆ. ಸಕಾಲ ಯೋಜನೆ ಸಂಬಂಧ ತರಬೇತಿ ಕಾರ್ಯಕ್ರಮಗಳು, ಜಿಲ್ಲಾವಾರು/ಇಲಾಖಾವಾರು/ಅರ್ಜಿ ಬಾಕಿ ವಿಶ್ಲೇಷಣೆ/ ತಿರಸ್ಕೃತಗಳು/ವಿಳಂಬ ವಿಲೆ/ಸಾರ್ವಜನಿಕರ ಮರುಸ್ಪಂದನೆ/ಶ್ರೇಯಾಂಕ ವಿಶ್ಲೇಷಣೆ /ಕ್ಷೇತ್ರ ಭೇಟಿ ಸಮಯದಲ್ಲಿ ಅಗತ್ಯವಿರುವ ವರದಿಗಳು/ ಪತ್ರಿಕಾ ವರದಿ/ಸಭೆಗಳಿಗೆ ಟಿಪ್ಪಣಿಗಳು/ ಮಾಸಿಕ ವರದಿಗಳನ್ನು ತಯಾರಿಸುವ ಕಾರ್ಯಗಳು/ ಸಾರ್ವಜನಿಕರು ಸಕಾಲ ಮಂಡಳಿಗೆ ಖುದ್ದಾಗಿ ಭೇಟಿ ನೀಡಿದಾಗ ಅವರ ಅಹವಾಲುಗಳನ್ನು ನಿರ್ವಹಿಸುವುದು/ಕರೆ ಕೇಂದ್ರಗಳ ಮೇಲ್ವಿಚಾರಣೆ ನಡೆಸುವುದು, ಜನಜಾಗೃತಿ ಕಾರ್ಯಕ್ರಮಗಳು, ಹೀಗೆ ಇನ್ನೂ ಹಲವಾರು ಕಾರ್ಯಗಳನ್ನು ಸಕಾಲ ಮಂಡಳಿಯಲ್ಲಿ ನಿರ್ವಹಿಸಲಾಗುತ್ತಿದೆ. "ಸಕಾಲ" ಯೋಜನೆಯು ನಾಗರೀಕರ ವಿಶ್ವಾಸವನ್ನು ಗಳಿಸುವಲ್ಲಿ ಯಶಸ್ವಿ ಹೆಜ್ಜೆಯನ್ನು ಇಡುತ್ತಿರುವುದರಿಂದ

ಯೋಜನೆಯ ಗುಣಮಟ್ಟವನ್ನುಕಾಯಲು ಸಕಾಲ ಮಂಡಳಿಗೆ ಹುದ್ದೆಗಳನ್ನು ಸೃಜಿಸುವುದು ಅನಿವಾರ್ಯವಾಗಿದೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸಕಾಲ ಮಂಡಳಿಗೆ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲು ಅನುಮೋದನೆಯನ್ನು ನೀಡಲು ಆರ್ಥಿಕ ಇಲಾಖೆಯನ್ನು ಕೋರಲಾಗಿತ್ತು.

| ಕ್ರಮ ಸಂಖ್ಯೆ | ಹುದ್ದೆಗಳು | ಹುದ್ದೆಗಳ ಸಂಖ್ಯೆ |
|---|---|---|
| 1 | ಸಹಾಯಕ ಆಡಳಿತಾಧಿಕಾರಿ (ಗ್ರೇಡ್–1 ತಹಶೀಲ್ದಾರ್ ರ‍್ಯಾಂಕ್) | 02 |
| 2 | ನಿರ್ವಹಣಾ ಸಮಾಲೋಚಕರು | 01 |
| 3 | ರಾಜ್ಯ ಮಾಹಿತಿ ತಂತ್ರಜ್ಞಾನ ಸಮಾಲೋಚಕರು – (ಆನ್‌ಲೈನ್ + ತರಬೇತಿ) | 01 |
| 4 | ಡಾಟಾ ಎಂಟ್ರಿ ಆಪರೇಟರ್ಸ್ (ದತ್ತಾಂಶ ನಮೂದಕರು) | 02 |
| 5 | ಗ್ರೂಪ್ –ಡಿ | 01 |
| | ಒಟ್ಟು | **07** |

ಮೇಲೆ ಓದಲಾದ (4)ರ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಸಕಾಲ ಮಂಡಳಿಗೆ ಈ ಕೆಳಕಂಡ 04 ಹುದ್ದೆಗಳನ್ನು ಸೃಜಿಸಲು ಸಹಮತಿಸಿರುತ್ತದೆ.

| ಕ್ರಮ ಸಂಖ್ಯೆ | ಹುದ್ದೆಗಳು | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ |
|---|---|---|---|
| 1 | ಸಹಾಯಕ ಆಡಳಿತಾಧಿಕಾರಿ (ಗ್ರೇಡ್–1 ತಹಶೀಲ್ದಾರ್ ರ‍್ಯಾಂಕ್) | 01 | ನಿಯೋಜನೆ ಮೇಲೆ |
| 2 | ಡಾಟಾ ಎಂಟ್ರಿ ಆಪರೇಟರ್ಸ್ (ದತ್ತಾಂಶ ನಮೂದಕರು) | 02 | ಹೊರಗುತ್ತಿಗೆ |
| 3 | ಗ್ರೂಪ್ –ಡಿ | 01 | ಹೊರಗುತ್ತಿಗೆ |

ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 184 ನಾಸೇಖಾ 2013, ಬೆಂಗಳೂರು, ದಿನಾಂಕ: 28–11–2013**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ "ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ, 2011" ರ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಸಕಾಲ ಮಂಡಳಿಗೆ ಈ ಕೆಳಕಂಡಂತೆ ಹೆಚ್ಚುವರಿ ಸಿಬ್ಬಂದಿಯವರನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಗಳು | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ |
|---|---|---|---|
| 1 | ಸಹಾಯಕ ಆಡಳಿತಾಧಿಕಾರಿ (ಗ್ರೇಡ್–1 ತಹಶೀಲ್ದಾರ್ ರ‍್ಯಾಂಕ್) | 01 | ನಿಯೋಜನೆ ಮೇಲೆ |
| 2 | ಡಾಟಾ ಎಂಟ್ರಿ ಆಪರೇಟರ್ಸ್ (ದತ್ತಾಂಶ ನಮೂದಕರು) | 02 | ಹೊರಗುತ್ತಿಗೆ |
| 3 | ಗ್ರೂಪ್ –ಡಿ | 01 | ಹೊರಗುತ್ತಿಗೆ |
| | ಒಟ್ಟು | **04 ಹುದ್ದೆಗಳು** | – |

ಈ ವೆಚ್ಚವನ್ನು 2013–14ನೇ ಸಾಲಿಗೆ ಲೆಕ್ಕ ಶೀರ್ಷಿಕೆ "2052–00–090–0–26–051" (ಯೋಜನೇತರ) "ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ, 2011"ರ ಅನುಷ್ಠಾನದಡಿ ಭರಿಸುವುದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 812/686 ವೆಚ್ಚ–12/2013, ದಿನಾಂಕ 18–11–2013 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎನ್. ವರಪ್ರಸಾದ್ ರೆಡ್ಡಿ,**
ಆಡಳಿತಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಆಡಳಿತ ಸುಧಾರಣೆ–ನಾಗರೀಕ ಸೇವೆಗಳು)

PR. 02
SC. 2000

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ರಾಜ್ಯ ಮುಖ್ಯ ಮಾಹಿತಿ ಆಯುಕ್ತರು ಮತ್ತು ರಾಜ್ಯ ಮಾಹಿತಿ ಆಯುಕ್ತರ ನೇಮಕಾತಿಗೆ ಶಿಫಾರಸ್ಸು ಮಾಡಲು ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:**
1. ಮುಖ್ಯ ಮಾಹಿತಿ ಆಯುಕ್ತರವರ ಅರೆ ಸರ್ಕಾರಿ ಪತ್ರ ಸಂಖ್ಯೆ : ಕಮಾಆ/74/ಆಡಳಿತ/2013, ದಿನಾಂಕ 11–09–2013.
2. ಮಾನ್ಯ ಮುಖ್ಯಮಂತ್ರಿಗಳ ಟಿಪ್ಪಣಿ ಸಂಖ್ಯೆ : ಸಿಆಸುಇ/122/ಆರ್‌ಟಿಐ/2013, ಪ್ಯಾರಾ ಸಂಖ್ಯೆ :28, ದಿನಾಂಕ 29–10–2013.

**ಪ್ರಸ್ತಾವನೆ:**

ಭಾರತ ಸರ್ಕಾರವು 2005ರ ಮಾಹಿತಿ ಹಕ್ಕು ಕಾಯ್ದೆಯನ್ನು (ಕೇಂದ್ರ ಕಾಯ್ದೆಯ ಸಂಖ್ಯೆ : 22/2005) ಜಾರಿಗೆ ತಂದಿದೆ. ಈ ಕಾಯ್ದೆಯನ್ನು ದಿನಾಂಕ 21–06–2005ರ ಭಾರತದ ರಾಜ್ಯಪತ್ರದಲ್ಲಿ ಅಧಿಸೂಚಿತಗೊಳಿಸಲಾಗಿದೆ. ಈ ಕಾಯ್ದೆಯು ಭಾರತದ ಎಲ್ಲಾ ರಾಜ್ಯಗಳಿಗೆ (ಜಮ್ಮು ಕಾಶ್ಮೀರ ಹೊರತುಪಡಿಸಿ) ಅನ್ವಯವಾಗುತ್ತದೆ. ಕರ್ನಾಟಕದಲ್ಲಿ ದಿನಾಂಕ 15–06–2005 ರಿಂದ ಕಾಯ್ದೆಯು ಜಾರಿಗೆ ಬಂದಿರುತ್ತದೆ. ಈ ಕಾಯಿದೆಯ ಸೆಕ್ಷನ್ 15 ರಡಿಯಲ್ಲಿ ರಾಜ್ಯ ಸರ್ಕಾರವು ರಾಜ್ಯ ಮಾಹಿತಿ ಆಯೋಗವನ್ನು ರಚಿಸಿದೆ. ಈ ಕಾಯಿದೆಯ ಕಲಂ 15 (2) (ಬಿ) ರಡಿಯಲ್ಲಿ ಈ ಆಯೋಗವು ರಾಜ್ಯ ಮುಖ್ಯ ಮಾಹಿತಿ ಆಯುಕ್ತರು ಮತ್ತು 10ಕ್ಕೆ ಮೀರದಂತೆ ಅಗತ್ಯವಿದ್ದಷ್ಟು ಸಂಖ್ಯೆಯ ರಾಜ್ಯ ಮಾಹಿತಿ ಆಯುಕ್ತರನ್ನು ಹೊಂದಲು ಅವಕಾಶ ಕಲ್ಪಿಸಲಾಗಿದೆ. ಇದೇ ಕಾಯಿದೆ ಕಲಂ 15 ಉಪಖಂಡ (6)ರ ಪ್ರಕಾರ ರಾಜ್ಯ ಮುಖ್ಯ ಮಾಹಿತಿ ಆಯುಕ್ತರು ಮತ್ತು ರಾಜ್ಯ ಮಾಹಿತಿ ಆಯುಕ್ತರು ಸಂಸತ್ತಿನ ಸದಸ್ಯರಾಗಿರತಕ್ಕದ್ದಲ್ಲ, ಯಾವುದೇ ರಾಜ್ಯ ವಿಧಾನ ಮಂಡಲದ/ಕೇಂದ್ರಾಡಳಿತ ಪ್ರದೇಶದ ಸದಸ್ಯರಾಗಿರತಕ್ಕದ್ದಲ್ಲ ಹಾಗೂ ಯಾವುದೇ ರಾಜಕೀಯ ಪಕ್ಷಕ್ಕೆ ಸೇರಿದವರಾಗಿರತಕ್ಕದ್ದಲ್ಲ ಮತ್ತು ಯಾವುದೇ ಇತರೆ ಲಾಭದಾಯಕ ಹುದ್ದೆಯನ್ನಾಗಲಿ, ಯಾವುದೇ ಉದ್ಯೋಗ/ವ್ಯಾಪಾರ ವ್ಯವಹಾರಗಳಲ್ಲಾಗಲಿ ನಿರತರಾಗಿರತಕ್ಕದ್ದಲ್ಲ.

ಮುಖ್ಯ ಮಾಹಿತಿ ಆಯುಕ್ತರು, ಕರ್ನಾಟಕ ಮಾಹಿತಿ ಆಯೋಗ ಇವರು ಮೇಲೆ ಓದಲಾದ 1ರ ಪತ್ರದಲ್ಲಿ ಸದ್ಯಕ್ಕೆ ಆಯೋಗದಲ್ಲಿ ಒಬ್ಬ ಮುಖ್ಯ ಮಾಹಿತಿ ಆಯುಕ್ತರು ಮತ್ತು ನಾಲ್ಕು ಜನ ಮಾಹಿತಿ ಆಯುಕ್ತರುಗಳು ಕಾರ್ಯನಿರ್ವಹಿಸುತ್ತಿದ್ದಾರೆ ಮತ್ತು ಈಗಾಗಲೇ ಪೂರಕ ಸಿಬ್ಬಂದಿಯೊಡನೆ ಸೃಜನೆಯಾಗಿರುವ ಎರಡು ಮಾಹಿತಿ ಆಯುಕ್ತರ ಹುದ್ದೆಗಳು ಖಾಲಿ ಇರುತ್ತವೆ ಎಂದು ತಿಳಿಸಿ, ಸದರಿ ಹುದ್ದೆಗಳನ್ನು ಭರ್ತಿ ಮಾಡುವಂತೆ ಕೋರಿರುತ್ತಾರೆ.

ಮಾಹಿತಿ ಹಕ್ಕು ಕಾಯಿದೆ 2005 ರ ಕಲಂ 15(3) ರಲ್ಲಿ ರಾಜ್ಯ ಮುಖ್ಯ ಮಾಹಿತಿ ಆಯುಕ್ತರು ಹಾಗೂ ರಾಜ್ಯ ಮಾಹಿತಿ ಆಯುಕ್ತರುಗಳನ್ನು ಮಾನ್ಯ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ರಚಿತವಾದ ಸಮಿತಿಯ ಶಿಫಾರಸ್ಸಿನ ಮೇರೆಗೆ ರಾಜ್ಯಪಾಲರು ನೇಮಕ ಮಾಡಲು ಅವಕಾಶ ಕಲ್ಪಿಸಲಾಗಿದೆ.

ಮಾಹಿತಿ ಹಕ್ಕು ಅಧಿನಿಯಮ ಸೆಕ್ಷನ್ 15(3) ರನ್ವಯ ರಾಜ್ಯ ಮಾಹಿತಿ ಆಯುಕ್ತರ ಹುದ್ದೆಯ ನೇಮಕಾತಿಗೆ ಸಂಬಂಧಿಸಿದಂತೆ ಮೇಲೆ ಓದಲಾದ ಉಲ್ಲೇಖ 2ರ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯಮಂತ್ರಿಯವರು, ಮಾನ್ಯ ಕಾನೂನು, ನ್ಯಾಯಾಂಗ ಮತ್ತು ಮಾನವ ಹಕ್ಕುಗಳು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಪಶುಸಂಗೋಪನೆ ಸಚಿವರನ್ನು ಸಮಿತಿಗೆ ನೇಮಕ ಮಾಡಲು ಆದೇಶಿಸಿರುತ್ತಾರೆ.

ಅದರಂತೆ, ರಾಜ್ಯ ಮಾಹಿತಿ ಆಯುಕ್ತರ ಹುದ್ದೆಯ ನೇಮಕಾತಿಗಾಗಿ ಸೂಕ್ತ ಹೆಸರುಗಳನ್ನು ಶಿಫಾರಸ್ಸು ಮಾಡಲು ಈ ಕೆಳಕಂಡ ಸಮಿತಿಯನ್ನು ರಚಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಗಿನ ಆದೇಶ :

### ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 122 ಆರ್‌ಟಿಐ 2013, ಬೆಂಗಳೂರು, ದಿನಾಂಕ: 14–11–2013

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಮಾಹಿತಿ ಹಕ್ಕು ಕಾಯಿದೆ 2005ರ ಕಲಂ 15(3)ರನ್ವಯ, ರಾಜ್ಯ ಮಾಹಿತಿ ಆಯುಕ್ತರ ಹುದ್ದೆಗಳ ನೇಮಕಾತಿಗೆ ಸೂಕ್ತ ಶಿಫಾರಸ್ಸುಗಳನ್ನು ಮಾಡಲು ಈ ಕೆಳಗೆ ನಮೂದಿಸಿರುವ ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ:–

| | | | |
|---|---|---|---|
| 1. | ಮುಖ್ಯಮಂತ್ರಿಗಳು | – | ಅಧ್ಯಕ್ಷರು |
| 2. | ವಿಧಾನಸಭೆಯ ವಿರೋಧ ಪಕ್ಷದ ನಾಯಕರು | – | ಸದಸ್ಯರು |
| 3. | ಕಾನೂನು, ನ್ಯಾಯಾಂಗ ಮತ್ತು ಮಾನವ ಹಕ್ಕುಗಳು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಪಶುಸಂಗೋಪನೆ ಸಚಿವರು | – | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಬಿ. ಪ್ರಫುಲ್ಲವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಜನಸ್ಪಂದನ ಕೋಶ–ಮಾಹಿತಿ ಹಕ್ಕು)

**PR. 03**
**SC. 25**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಡಿ.ಎಂ. ರಾಜಣ್ಣ, ಸರ್ಕಾರದ ಅಧೀನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣ ಮತ್ತು ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:**

1. ಆರಕ್ಷಕ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗ ಇವರು ಕಳುಹಿಸಿರುವ ಬಂಧನ ತಿಳುವಳಿಕೆ ಪತ್ರ ದಿನಾಂಕ 4–7–2013.
2. ಸರ್ಕಾರದ ಅಪರ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ ಪಸಂಮೀ 9 ಸಮನ್ವಯ 2013, ದಿನಾಂಕ 5–7–2013.
3. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 8 ಸೇಇವಿ 2013, ದಿನಾಂಕ 16–7–2013.
4. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಅರ್ಜಿ ಸಂಖ್ಯೆ 4921/2013ರಲ್ಲಿ ದಿನಾಂಕ 19.8.2013ರಂದು ನೀಡಿರುವ ತೀರ್ಪು.
5. ಹೆಚ್ಚುವರಿ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ–41/2013, ದಿನಾಂಕ 15–7–2013.
6. ಶ್ರೀ ಡಿ.ಎಂ. ರಾಜಣ್ಣ, ಸರ್ಕಾರದ ಅಧೀನ ಕಾರ್ಯದರ್ಶಿ (ಅಮಾನತ್ತಿನ ಆದೇಶದಲ್ಲಿ), ಇವರು ಸಲ್ಲಿಸಿರುವ ಮನವಿ ದಿನಾಂಕ 28–8–2013.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆರಕ್ಷಕ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗ ಬಂಧನ ತಿಳುವಳಿಕೆ ಪತ್ರದಲ್ಲಿ ಶ್ರೀ ಡಿ.ಎಂ. ರಾಜಣ್ಣ, ಸರ್ಕಾರದ ಅಧೀನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ ಇವರನ್ನು ಲಂಚ ನಿರೋಧಕ ಕಾಯ್ದೆ 1988ರಡಿ ದಿನಾಂಕ 4–7–2013 ರಂದು ರಾತ್ರಿ ಸುಮಾರು 8–00 ಗಂಟೆಯಲ್ಲಿ ದಸ್ತಗಿರಿ ಮಾಡಲಾಗಿದೆ ಎಂದು ತಿಳಿಸಿದ ಪತ್ರವನ್ನು ಅಪರ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, ಇವರು ಮೇಲೆ ಓದಲಾದ ಕ್ರ.ಸಂ. (2)ರ ಅನಧಿಕೃತ ಟಿಪ್ಪಣಿಯೊಂದಿಗೆ ಮುಂದಿನ ಕ್ರಮಕ್ಕಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಕಳುಹಿಸಿದ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರ.ಸಂ. (3)ರ ಸರ್ಕಾರಿ ಆದೇಶವನ್ನು ಹೊರಡಿಸಿ, ಶ್ರೀ ಡಿ.ಎಂ. ರಾಜಣ್ಣ, ಹಿಂದಿನ ಸರ್ಕಾರದ ಅಧೀನ ಕಾರ್ಯದರ್ಶಿ, ಪಶುಸಂಗೋಪನಾ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ಶಿಸ್ತು ಕ್ರಮ ಬಾಕಿಯಿಟ್ಟು, ದಿನಾಂಕ 4–7–2013 ರಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿದೆ.

ತದನಂತರ ಸದರಿ ಆದೇಶದ ವಿರುದ್ಧ ಆರೋಪಿತ ಅಧಿಕಾರಿಯವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಗೆ ಅರ್ಜಿ ಸಲ್ಲಿಸಿದ್ದರ ಹಿನ್ನೆಲೆಯಲ್ಲಿ ಮೇಲೆ ಓದಲಾದ (4) ರಲ್ಲಿ ಸದರಿ ಅರ್ಜಿ ಮೇಲೆ ದಿನಾಂಕ 19–8–2013 ರಂದು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ತೀರ್ಪು ನೀಡಿದ್ದು, ಅದರ ಉಧೃತ ಭಾಗವು ಈ ಕೆಳಕಂಡಂತೆ ಇರುತ್ತದೆ :

> We allow the application and quash the suspension Order No. ಸಿಆಸುಇ 8 ಸೇಇವಿ 2013 Dated 16.7.2013. The applicant shall be taken back to duty forthwith. However, this does not come in the way of the Government in examining the materials and taking further action including that of suspension, if the materials are sufficient.

ಏತನ್ಮಧ್ಯೆ, ಉಲ್ಲೇಖ (5) ರಲ್ಲಿ ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಸರ್ಕಾರಕ್ಕೆ ವರದಿ ನೀಡಿದ್ದು ಸದರಿ ವರದಿಯಲ್ಲಿ ಈ ಕೆಳಕಂಡ ಅಂಶಗಳನ್ನು ಪ್ರಸ್ತಾಪಿಸಲಾಗಿದೆ.

> ಅದರಂತೆ, ಫಿರ್ಯಾದಿಯು (ಶ್ರೀ ವಿ. ವೆಂಕಟಚಲಯ್ಯ) ಈ ಹಿಂದೆ 2010–11ನೇ ಸಾಲಿನಲ್ಲಿ ಮೀನುಗಾರಿಕೆ ಇಲಾಖೆಯಲ್ಲಿ ಹಿರಿಯ ಸಹಾಯಕರಾಗಿ ಮಂಡ್ಯ ಜಿಲ್ಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯ ಲೋಪ ಎಸಗಿರುವ ಆರೋಪದ ಮೇಲೆ ಫಿರ್ಯಾದಿಯ ವಿರುದ್ಧ ಇಲಾಖಾ ವಿಚಾರಣೆ ಕ್ರಮ ಕೈಗೊಳ್ಳಲಾಗಿರುತ್ತದೆ. ಏಪ್ರಿಲ್–2013 ರಲ್ಲಿ ಫಿರ್ಯಾದಿಯು ಆರೋಪಿತರನ್ನು ಭೇಟಿ ಮಾಡಿ ತಮ್ಮ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈ ಬಿಡಲು ಕೋರಿದಾಗ, ಆರೋಪಿತರು ರೂ. 5,000/– ಗಳ ಲಂಚದ ಹಣಕ್ಕಾಗಿ ಒತ್ತಾಯಿಸಿ, ಫಿರ್ಯಾದಿಯಿಂದ ರೂ. 1,000/– ಗಳನ್ನು ಮುಂಗಡವಾಗಿ ಪಡೆದುಕೊಂಡಿದ್ದು, ಇನ್ನೂಳಿದ ಲಂಚದ ಹಣಕ್ಕಾಗಿ ಒತ್ತಾಯಿಸಿರುತ್ತಾರೆ ಎಂಬುದಾಗಿರುತ್ತದೆ. ಆರೋಪಿತರು ಒತ್ತಾಯಿಸಿದಂತೆ, ಲಂಚದ ಹಣ ಕೊಡಲು ಫಿರ್ಯಾದಿಗೆ ಇಷ್ಟವಿಲ್ಲದ ಕಾರಣ ಸದರಿಯವರ ವಿರುದ್ಧ ಕಾನೂನು ರೀತ್ಯಾ ಕ್ರಮ ಕೈಗೊಳ್ಳಬೇಕೆಂದು ಕೋರಿದ್ದ, ಹಿನ್ನೆಲೆಯಲ್ಲಿ ಪೋಲೀಸ್ ನಿರೀಕ್ಷಕರು, ಬೆಂಗಳೂರು ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಶ್ರೀ ಡಿ.ಎಂ. ರಾಜಣ್ಣ, ಅಂದಿನ ಸರ್ಕಾರದ ಅಧೀನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ವಿಕಾಸಸೌಧ, 4ನೇ ಮಹಡಿ, ಡಾ॥ ಅಂಬೇಡ್ಕರ್ ವೀಧಿ, ಬೆಂಗಳೂರು ಇವರ ವಿರುದ್ಧ ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ 1988ರ ಕಲಂ 7, 13(1)ರ ಸಹವಾಚನ 13(2) ರನ್ವಯ/ದಿನಾಂಕ 4–7–2013 ರಂದು

ಬೆಂಗಳೂರು ನಗರ ಲೋಕಾಯುಕ್ತ ಪೋಲೀಸ್ ಠಾಣಾ ಮೊಕದ್ದಮೆ ಸಂಖ್ಯೆ 41/2013 ರಡಿ ಪ್ರಕರಣ ದಾಖಲಿಸಿ ತನಿಖೆ ಕೈಗೊಂಡು ಔಚಿತ್ಯಪೂರ್ವ ಕಾರ್ಯಗಳನ್ನು ನೆರವೇರಿಸಿದ ನಂತರ, ತನಿಖಾಧಿಕಾರಿಯು ತಮ್ಮ ಸಿಬ್ಬಂದಿ ಹಾಗೂ ಪಂಚ ಸಾಕ್ಷಿಗಳ ಸಮೇತ ದಿನಾಂಕ 4–7–2013 ರಂದು ಆರೋಪಿತ ಶ್ರೀ ಡಿ.ಎಂ. ರಾಜಣ್ಣ, ಅಧೀನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ಬೆಂಗಳೂರು ಇವರು ಶ್ರೀ ವಿ. ವೆಂಕಟಚಲಯ್ಯ ಇವರಿಂದ ಒತ್ತಾಯಿಸಿದ ಲಂಚದ ಹಣ ರೂ. 4,000/– ಗಳನ್ನು ಬೆಂಗಳೂರು ನಗರ ಕೇಂದ್ರ ರೈಲ್ವೆ ನಿಲ್ದಾಣದ ಆವರಣದಲ್ಲಿ ಸ್ವೀಕರಿಸುತ್ತಿದ್ದಾಗ, ಲೋಕಾಯುಕ್ತ ಪೋಲೀಸರ ಬಲೆಗೆ ನೇರವಾಗಿ ಸಿಕ್ಕಿ ಬಿದ್ದಿರುತ್ತಾರೆ.

ಆರೋಪಿತರು ಫಿರ್ಯಾದಿಯಿಂದ ಸ್ವೀಕರಿಸಿದ ಲಂಚದ ಹಣವನ್ನು ತಾವು ಧರಿಸಿದ್ದ ಪ್ಯಾಂಟ್‌ನ ಬಲ ಭಾಗದ ಜೇಬಿನಲ್ಲಿ ಒಂದು ಕರವಸ್ತ್ರದೊಳಗೆ ಇಟ್ಟುಕೊಂಡಿದ್ದು, ಅದನ್ನು ಯಥಾ ರೀತಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ. ಆರೋಪಿತರ ಎರಡೂ ಕೈ ಬೆರಳುಗಳನ್ನು ಹಾಗೂ ಲಂಚದ ಹಣವಿಟ್ಟಿದ್ದ ಕರವಸ್ತ್ರವನ್ನು ಸೋಡಿಯಂ ಕಾರ್ಬೋನೇಟ್ ಮಿಶ್ರಣದ ದ್ರಾವಣಗಳಲ್ಲಿ ಪ್ರತ್ಯೇಕವಾಗಿ ಅದ್ದಿಸಿ ತೊಳೆಸಿದಾಗ, ಬಣ್ಣ ರಹಿತವಾದ ದ್ರಾವಣಗಳು ಅನುಕ್ರಮವಾಗಿ ಮಾಸಲು ಹಾಗೂ ಗುಲಾಬಿ ಬಣ್ಣಕ್ಕೆ ತಿರುಗುವುದರ ಮೂಲಕ ಸಕಾರಾತ್ಮಕವಾಗಿ ಪ್ರತಿಕ್ರಯಿಸಿರುತ್ತವೆ. ಆರೋಪಿ ಶ್ರೀ ಡಿ.ಎಂ. ರಾಜಣ್ಣ, ಅಧೀನ ಕಾರ್ಯದರ್ಶಿ ಇವರನ್ನು ದಿನಾಂಕ 4–7–2013 ರಂದು ಲಂಚ ಸ್ವೀಕಾರದ ಆರೋಪದ ಮೇಲೆ ದಸ್ತಗಿರಿ ಮಾಡಿ ಘನ ನ್ಯಾಯಾಧೀಶರ ಮುಂದೆ ಹಾಜರುಪಡಿಸಲಾಗಿದ್ದು, ನ್ಯಾಯಾಧೀಶರ ಆದೇಶದಂತೆ, ಆರೋಪಿತರನ್ನು ನ್ಯಾಯಾಂಗ ಬಂಧನಕ್ಕೆ ಒಪ್ಪಿಸಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಆರೋಪಿತರಾದ ಶ್ರೀ ಡಿ.ಎಂ. ರಾಜಣ್ಣ, ಅಧೀನ ಕಾರ್ಯದರ್ಶಿರವರ ವಿರುದ್ಧದ ಭ್ರಷ್ಟಾಚಾರದ ಆಪಾದನೆಗಳು ಈವರೆಗೆ ದೊರೆತಿರುವ ಸಾಕ್ಷ್ಯಾಧಾರಗಳಿಂದ ಸಾಬೀತಾಗಿರುವುದರಿಂದ ಆರೋಪಿತರು ತಮ್ಮ ಸ್ಥಾನದಲ್ಲಿಯೇ ಮುಂದುವರೆದರೆ ತನಿಖೆಯ ಹಾದಿಯನ್ನು ತಪ್ಪಿಸುವ ಮತ್ತು ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಅವಕಾಶಗಳಿರುವುದರಿಂದ, ಸದರಿಯವರನ್ನು ಸರ್ಕಾರಿ ಸೇವೆಯಿಂದ ತಕ್ಷಣದಿಂದಲೇ ಅಮಾನತ್ತಿನಲ್ಲಿಟ್ಟು, ಲೀನ್‌ನ್ನು ಬೇರೆ ಕಡೆಗೆ ವರ್ಗಾಯಿಸಲು ಕೋರಲಾಗಿದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶವನ್ನು ಗಮನದಲ್ಲಿರಿಸಿಕೊಂಡು ಹಾಗೂ ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ/ನಂತರ, ಆಪಾದಿತ ಅಧಿಕಾರಿಯಾದ ಶ್ರೀ ಡಿ.ಎಂ. ರಾಜಣ್ಣ, ಸರ್ಕಾರದ ಅಧೀನ ಕಾರ್ಯದರ್ಶಿ, ಇವರು ಲಂಚದ ಹಣಕ್ಕಾಗಿ ಫಿರ್ಯಾದುದಾರರನ್ನು ಒತ್ತಾಯಿಸಿರುವುದು ಮತ್ತು ಅದನ್ನು ಪಡೆದಿರುವುದು ಮೇಲಿನ ವಿವರಗಳಿಂದ ಮೇಲ್ನೋಟಕ್ಕೆ ಸಾಬೀತಾಗಿರುವುದು ಸರ್ಕಾರಕ್ಕೆ ಮನವರಿಕೆಯಾಗಿರುವುದರಿಂದಲೂ, ಪ್ರಕರಣದ ಸುಗಮ ತನಿಖೆಯ ಹಿತದೃಷ್ಟಿಯಿಂದ ಇವರನ್ನು ಸೇವೆಯಲ್ಲಿ ಮುಂದುವರಿಸುವುದು ಸಮಂಜಸವಲ್ಲವೆಂದು ನಿರ್ಣಯಿಸಿ ಸರ್ಕಾರವು ಶ್ರೀ ಡಿ.ಎಂ. ರಾಜಣ್ಣ, ಸರ್ಕಾರದ ಅಧೀನ ಕಾರ್ಯದರ್ಶಿ ಇವರನ್ನು ಮುಂದಿನ ತನಿಖೆ / ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತಿನಲ್ಲಿರಿಸಲು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 8 ಸೇಇವಿ 2013, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಡಿ.ಎಂ. ರಾಜಣ್ಣ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಇವರ ವಿರುದ್ಧ ಶಿಸ್ತು ಕ್ರಮವನ್ನು ಬಾಕಿಯಿರಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಮುಂದುವರೆದು, ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 8 ಸೇಇವಿ 2013, ದಿನಾಂಕ 16–7–2013 ರಲ್ಲಿ ಹೊರಡಿಸಲಾದ ಆದೇಶವನ್ನು ಹಿಂಪಡೆಯಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಡಿ.ಎಂ. ರಾಜಣ್ಣ, ಸರ್ಕಾರದ ಅಧೀನ ಕಾರ್ಯದರ್ಶಿ ಇವರು ಕೆ.ಸಿ.ಎಸ್.ಆರ್. ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ ಹಾಗೂ ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಸೇವೆಗಳು–6)

PR. 04

## PERSONNEL AND ADMINISTRATIVE REFORMS SECRETARIAT

**Sub :** Extension of deputation of Sqn Ldr. Vivek Sarpal (27532), ADC to Governor of Karnataka.

**Read :** (1) Order No. DPAR 23 PRB 2011, Dated 30-8-2011

(2) Letter No. Air HQ/219 74/ADC/PO-1 (Dep), dated 17-6-2013 of the Wing Commander Director Personnel Officers-1 (Deputation)

(3) Letter No. GS 37 EST 2011, dated 09-07-2013 of the Under Secretary to Governor.

**PREAMBLE :**

In the Order read at (1) above, Government have been appointed Sqn Ldr. Vivek Sarpal (27532) ACCTS as ADC to the Governor of Karnataka for a period of 2 years from the date of his assuming charge.

In the letter read at (2) above, Wing Commander Director Personnel Officers-1 (Deputation) have approved for deputation tenure of Sqn Ldr Vivek Sarpal (27532) ACCTS, ADC to the Governor of Karnataka for a period of four months beyond 22nd August 2013 (i.e. upto 31. Dec. 2013).

In the letter read at (3) above, Under Secretary to Governor have requested to extend the period of deputation of Sqn. Ldr. Vivek Sarpal (27532), ADC to Governor of Karnataka for a period of four months beyond 22nd August 2013, i.e. up to 31st December 2013.

The proposal has been examined, and the following orders are issued :

**ORDER NO. DPAR 19 PRB 2013, Bangalore, Dated: 30-08-2013**

Government are pleased to extend the period of deputation of Sqn. Ldr. Vivek Sarpal (27532), ADC to Governor of Karnataka for a period of four months i.e. 23rd August 2013 to 31st December 2013. The terms and conditions of deputation remain unchanged.

By Order and in the name of the Governor of Karnataka,

**L. SHANMUKHA,**

Joint Secretary to Government,

Department of Personnel and Administrative Reforms, (Admn.)

**P.R. 05**

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಪಸಂಮೀ 37 ಮೀಇಯೋ 2013, ಬೆಂಗಳೂರು, ದಿನಾಂಕ 08-11-2013**

ಅಧಿಸೂಚನೆ ಸಂಖ್ಯೆ : ಪಸಂಮೀ/37/ಮೀಇಯೋ/2013, ದಿನಾಂಕ 19-09-2013ರಲ್ಲಿನ ಕಂಡಿಕೆ-1ರ ಕಾಲಂ 3ರಲ್ಲಿ ನಮೂದಿಸಿರುವ "ಪರಿಷ್ಕೃತ ದರ 1000 ಸಂಖ್ಯೆ ಮೀನುಮರಿಗಳಿಗೆ (ರೂ.ಗಳಲ್ಲಿ)" ಎಂಬುದರ ಬದಲಾಗಿ "ಪರಿಷ್ಕೃತ ದರ 1000 ಸಂಖ್ಯೆ 70-80 ಎಂ.ಎಂ. ಉದ್ದದ ಬಲಿತ ಬಿತ್ತನೆ ಮೀನುಮರಿಗಳಿಗೆ (ರೂ.ಗಳಲ್ಲಿ)" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ಜಯಣ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

**PR. 07**

## ಆರ್ಥಿಕ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ಕಡ್ಡಾಯ ಜೀವ ವಿಮಾ ಯೋಜನೆಯಡಿ ದಿನಾಂಕ: 01.04.2008 ರಿಂದ 31.03.2010ಕ್ಕೆ ಅಂತ್ಯಗೊಂಡ ದ್ವೈವಾರ್ಷಿಕ ಅವಧಿಗೆ ಮೌಲ್ಯಮಾಪನ ವರದಿಯ ಆಧಾರದ ಮೇಲೆ ಜೀವ ವಿಮಾ ಪಾಲಿಸಿಗಳ ಸ್ಥಿರಪಡಿಸಿದ ಮೊತ್ತದ ಮೇಲೆ ಬೋನಸ್ ನೀಡಲು ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕೆಜಿಐಡಿ/ಎವಿಜಿ/2008-10-ವಿ.ಮೌ.ಮಾ/373/2013-14, ದಿನಾಂಕ: 03.09.2013.

**ಪ್ರಸ್ತಾವನೆ:**

ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ ಇವರು ಮೇಲೆ ಓದಲಾದ ದಿನಾಂಕ: 03.09.2013 ರ ಪತ್ರದಲ್ಲಿ 2008-2010 ನೇ ದ್ವೈವಾರ್ಷಿಕ ಅವಧಿಯ ಕಡ್ಡಾಯ ಜೀವ ವಿಮಾ ಪಾಲಿಸಿಗಳ ಮೌಲ್ಯ ಮಾಪನ ಮಾಡಿದ ವಿಮಾ ಗಣಕರ ವರದಿಯನ್ನು ಕಳುಹಿಸಿ, ಅದನ್ನು ಅನುಷ್ಠಾನಗೊಳಿಸಲು ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ. ಮೌಲ್ಯಮಾಪನ ವರದಿಯ ಪ್ರಮುಖ ಅಂಶಗಳು ಕೆಳಕಂಡಂತಿದೆ.

| | | |
|---|---|---|
| 1. | ಚಾಲ್ತಿಯಲ್ಲಿದ್ದ ಪಾಲಿಸಿಗಳು | : ಸಂಖ್ಯೆ: 11,28,709 |
| 2. | ವಿಮಾ ಭರವಸೆ ಮೊತ್ತ | : ರೂ: 8809.26 ಕೋಟಿಗಳು |
| 3. | ಪ್ರತ್ಯಾವರ್ತಿ ಅಧಲಾಭಾಂಶ | : ರೂ 3760.40 ಕೋಟಿಗಳು |
| 4. | ವಾರ್ಷಿಕ ಪ್ರೀಮಿಯಂ | : ರೂ. 429.48 ಕೋಟಿಗಳು |

5. ಜೀವ ವಿಮಾ ನಿಧಿಯ ಶಿಲ್ಕು : ರೂ. 4646.36 ಕೋಟಿಗಳು
6. ವಿಮಾ ವ್ಯವಹಾರದ ಮೇಲಿನ ನಿವ್ವಳ ಹೊಣೆಗಾರಿಕೆ : ರೂ. 3681.60 ಕೋಟಿಗಳು
7. ಮೌಲ್ಯಮಾಪನದ ಹೆಚ್ಚುವರಿ (Surplus) : ರೂ. 964.76 ಕೋಟಿಗಳು

ಆದುದರಿಂದ ದಿನಾಂಕ 31.03.2010 ರಂದು ಚಾಲ್ತಿಯಲ್ಲಿರುವ ಎಲ್ಲಾ ಪಾಲಿಸಿಗಳಿಗೆ ಪ್ರತಿ ಸಾವಿರ ವಿಮಾ ಮೊತಕ್ಕೆ ಪ್ರತಿ ವರ್ಷಕ್ಕೆ ರೂ.87/– ರಂತೆ ಪ್ರತ್ಯಾವರ್ತಿ ಲಾಭಾಂಶವನ್ನು ಒಟ್ಟು ರೂ.766.40 ಕೋಟಿಗಳಲ್ಲಿ ವಿತರಣೆ ಮಾಡಲು ಹಾಗೂ ಉಳಿದ 198.36 ಕೋಟಿ ಮೊತ್ತವನ್ನು ಮುಂದಿನ ಮೌಲ್ಯಮಾಪನ ಅವಧಿಗೆ ಕೊಂಡೊಯ್ಯಲು ವಿಮಾ ಗಣಕರು ಶಿಫಾರಸ್ಸು ಮಾಡಿರುತ್ತಾರೆ.

ಮುಂದುವರೆದು, ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಇವರು ಮೇಲಿನ ಅಂಶಗಳ ಆಧಾರದ ಮೇಲೆ ದಿನಾಂಕ: 31.03.2010 ರಂದು ಚಾಲ್ತಿಯಲ್ಲಿದ್ದ ಪಾಲಿಸಿಗಳ ಮೇಲೆ ವಿಮಾ ಮೊತ್ತದ ಪ್ರತಿ 1000/– ರೂ.ಗಳಿಗೆ ವಾರ್ಷಿಕ 87/–ರೂ. ದರದಲ್ಲಿ ಬೋನಸ್ ನೀಡುವುದರ ಜೊತೆಗೆ ದಿನಾಂಕ: 01.04.2010 ರಿಂದ 31.03.2012 ಅವಧಿಯಲ್ಲಿ ಅವದಿ ಪೂರ್ಣ, ಮರಣಜನ್ಯ ವಿಮಾತ್ಯಾಗ ಆದ ಪಾಲಿಸಿಗಳಿಗೂ ಸಹ ಮುಂದಿನ ಮೌಲ್ಯಮಾಪನ ದಿನಾಂಕದವರೆಗೆ ಪ್ರತಿ 1000/– ರೂ.ಗಳಿಗೆ ವಾರ್ಷಿಕ 87/– ರೂ. ಮಧ್ಯಂತರ ಲಾಭಾಂಶವನ್ನು ನೀಡಲು ವಿಮಾ ಗಣಕರು ಶಿಫಾರಸ್ಸು ಮಾಡಿರುತ್ತಾರೆಂದು ತಿಳಿಸಿ, ಈ ಕೆಳಕಂಡ ಪ್ರಸ್ತಾವನೆಗಳಿಗೆ ಸರ್ಕಾರದ ಆದೇಶವನ್ನು ನೀಡಬೇಕೇಂದು ನಿರ್ದೇಶಕರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

1) ದಿನಾಂಕ: 01–04–2008 ರಿಂದ 31.03.2010ರ ದ್ವೈವಾರ್ಷಿಕ ಮೌಲ್ಯಮಾಪನ ಅವಧಿಯಲ್ಲಿ ಚಾಲ್ತಿಯಲ್ಲಿದ್ದ ಎಲ್ಲಾ ಪಾಲಿಸಿಗಳಿಗೆ ಹಾಗೂ ಚಾಲ್ತಿಯಲ್ಲಿದ್ದ ಪ್ರತಿ ತಿಂಗಳ ಅವಧಿಯನ್ನು ಒಳಗೊಂಡಂತೆ ಪಾಲಿಸಿಗಳ ಸ್ಥಿರಪಡಿಸಿದ ವಿಮಾ ಮೊತ್ತದ ಮೇಲೆ ಪ್ರತಿ ಸಾವಿರ ರೂ.ಗಳಿಗೆ ಪ್ರತಿ ವರ್ಷಕ್ಕೆ ರೂ.87/– ರಂತೆ ಸರಳ ಪ್ರತ್ಯಾವರ್ತಿ ಲಾಭಾಂಶ (ಸಿಂಪಲ್ ರಿವರ್ಷನರಿ ಬೋನಸ್) ಘೋಷಿಸುವುದು.

2) ಅವಧಿಪೂರ್ಣ, ಮರಣಜನ್ಯ ಹಾಗೂ ವಿಮಾ ತ್ಯಾಗ ಮೌಲ್ಯಗಳಿಂದ ದಿನಾಂಕ: 01–04–2010 ರಿಂದ 31–03–2012ರ ಅವಧಿಯಲ್ಲಿ ಹೊರ ಹೋಗಿರುವ ವಿಮಾ ಪಾಲಿಸಿಗಳಿಗೆ ಪ್ರತಿ ಸಾವಿರ ರೂ. ವಿಮಾ ಮೊತ್ತಕ್ಕೆ ಪ್ರತಿ ವರ್ಷಕ್ಕೆ ರೂ. 87/– ರಂತೆ ಮಧ್ಯಂತರ ಲಾಭಾಂಶವನ್ನು (ಇಂಟೇರಿಯಮ್ ಬೋನಸ್) ಘೋಷಿಸುವುದು.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 27 ಕವಿಇ 2013, ಬೆಂಗಳೂರು, ದಿನಾಂಕ: 08–11–2013**

2008–2010ರ ದ್ವೈವಾರ್ಷಿಕ ಅವಧಿಯ ವಿಮಾ ಗಣನಾ ವರದಿ ಹಾಗೂ ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಇವರ ಶಿಫಾರಸ್ಸನ್ನು ವಿವರವಾಗಿ ಪರಿಶೀಲಿಸಿ ಕೆಳಕಂಡ ಅಂಶಗಳಿಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

i) ದಿನಾಂಕ: 31.03.2010ರಂದು ಚಾಲ್ತಿಯಲ್ಲಿದ್ದ ಎಲ್ಲಾ ಪಾಲಿಸಿಗಳಿಗೆ 2008–2010ರ ದ್ವೈವಾರ್ಷಿಕ ಅವಧಿಯಲ್ಲಿ ವಿಮಾ ಮೊತ್ತದ ಪ್ರತಿ 1000/–ರೂ.ಗಳಿಗೆ ವಾರ್ಷಿಕ 87/– ರೂ. ಬೋನಸ್ಸ್ ನೀಡುವುದು.

ii) ದಿನಾಂಕ: 01.04.2010 ರಿಂದ 31.03.2012ರ ಅವಧಿಯಲ್ಲಿ ಅವಧಿ ಪೂರ್ಣ, ಮರಣಜನ್ಯ ಹಾಗೂ ವಿಮಾ ತ್ಯಾಗ ಮೌಲ್ಯಗಳಿಂದ ಹೊರಹೋಗಿರುವ ವಿಮಾ ಪಾಲಿಸಿಗಳಿಗೆ ಮುಂದಿನ ಮೌಲ್ಯಮಾಪನ ದಿನಾಂಕದವರೆಗೆ ಪ್ರತಿ ರೂ.1000/–ಕ್ಕೆ ವಾರ್ಷಿಕ 87/–ರೂ. ಮಧ್ಯಂತರ ಬೋನಸ್ಸನ್ನು ನೀಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

**P.R. 1224**
**SC - 100**

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀಮತಿ ಜಿ.ರತ್ನಮಾಲ, ನಿವೃತ್ತ ಉಪ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆಯಲ್ಲಿ ವಿಚಾರಣಾ ನ್ಯಾಯಾಲಯದ ಸಜಾ ಆದೇಶವನ್ನುನುಸರಿಸಿ ಮಾಸಿಕ ವಿಶ್ರಾಂತಿ ವೇತನವನ್ನು ಶಾಶ್ವತವಾಗಿ ಹಿಂಪಡೆಯುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ:ಆಇ 268 ರಾಲೆಪ 2007, ದಿನಾಂಕ:18–11–2008 ಮತ್ತು 06–01–2009.
2. ಸ್ಪೆಷಲ್ ಜಡ್ಜ್‌ರವರ ನ್ಯಾಯಾಲಯ, ಬಾಗಲಕೋಟೆಯ ಪ್ರಕರಣ ಸಂಖ್ಯೆ:13/2009 ರಲ್ಲಿನ ತೀರ್ಪು ದಿನಾಂಕ:30–05–2012.
3. ಸರ್ಕಾರದ ಆದೇಶ ಸಂಖ್ಯೆ: ಆಇ 358 ರಾಲೆಪ 2007, ದಿನಾಂಕ:29–06–2012.
4. ಅಪಾದಿತರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಕಾರಣ ಕೇಳುವ ನೋಟೀಸು ದಿನಾಂಕ:30–04–2013.
5. ಕಾರಣ ಕೇಳುವ ನೋಟೀಸಿಗೆ ಅಪಾದಿತರು ಸಲ್ಲಿಸಿರುವ ಲಿಖಿತ ಉತ್ತರ ದಿನಾಂಕ:13–05–2013.
6. ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ 9 ಸೇಇವಿ 95, ದಿನಾಂಕ:26–06–1996.
7. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 109 ಸಿಎನ್‌ಎಸ್ 13, ದಿನಾಂಕ:30–09–2013.

**ಪ್ರಸ್ತಾವನೆ:**

ಶ್ರೀಮತಿ ಜಿ.ರತ್ನಮಾಲ, ನಿವೃತ್ತ ಉಪ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರು ಮುಖ್ಯ ಲೆಕ್ಕಾಧಿಕಾರಿಯಾಗಿ ಕೃಷ್ಣಾ ಮೇಲ್ದಂಡೆ ಯೋಜನೆ (ಭೂಸ್ವಾಧೀನ) ಬಾಗಲಕೋಟೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:02-08-2007ರಂದು ಲಂಚ ಪಡೆಯುವಾಗ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿ ಬಿದ್ದಿದ್ದು, ಇವರನ್ನು ಕರ್ನಾಟಕ ಲೋಕಾಯುಕ್ತ ಬಾಗಲಕೋಟೆ ಆರಕ್ಷಕ ಠಾಣೆಯಲ್ಲಿ ಗುನ್ನೆ ಸಂಖ್ಯೆ:8/2007 ರಲ್ಲಿ ಲಂಚ ನಿರೋಧಕ ಕಾಯ್ದೆ 1988ರ ಕಲಂ7, 13(1)(ಡಿ) ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ:(1)ರ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದೆ.

2. ಶ್ರೀಮತಿ ಜಿ.ರತ್ನಮಾಲ, ನಿವೃತ್ತ ಉಪ ನಿಯಂತ್ರಕರು ಇವರ ವಿರುದ್ಧ ಮಾನ್ಯ ಪ್ರಧಾನ ಜಿಲ್ಲಾ ಸತ್ರ ನ್ಯಾಯಾಲಯ, ಬಾಗಲಕೋಟೆ ಇಲ್ಲಿ ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2)ರ ಪ್ರಕಾರ ದೋಷಾರೋಪಣೆ ಪಟ್ಟಿ ಸಲ್ಲಿಸಲಾಗಿ ಘನ ನ್ಯಾಯಾಲಯವು ಈ ಪ್ರಕರಣವನ್ನು ವಿಶೇಷ ಪ್ರಕರಣ ಸಂಖ್ಯೆ:13/2009 ರಲ್ಲಿ ಅಂಗೀಕರಿಸಿ ವಿಚಾರಣೆ ಕೈಗೊಂಡು ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಲ್ಲಿನ ದಿನಾಂಕ:30.05.2012ರಂದು ನೀಡಿದ ತೀರ್ಪಿನಲ್ಲಿ ಶ್ರೀಮತಿ ಜಿ.ರತ್ನಮಾಲ ರವರಿಗೆ 3 ವರ್ಷಗಳ ಸಾದಾ ಸೆರೆವಾಸವನ್ನು ಹಾಗೂ ರೂ.3000/-ಗಳ ದಂಡವನ್ನು ವಿಧಿಸಿದೆ. ದಂಡ ಪಾವತಿಸಲು ತಪ್ಪಿದಲ್ಲಿ ಮತ್ತೆ 3 ತಿಂಗಳ ಸಾದಾ ಸೆರೆವಾಸವನ್ನು ವಿಧಿಸಿದೆ.

3. ಈ ಕ್ರಿಮಿನಲ್ ಮೊಕದ್ದಮೆ ಜಾರಿಯಲ್ಲಿದ್ದಾಗ ಅಧಿಕಾರ ದುರುಪಯೋಗ ಕುರಿತಂತೆ ಪ್ರತ್ಯೇಕ ಇಲಾಖಾ ವಿಚಾರಣೆ ನಡೆದು ಮೇಲೆ ಓದಲಾದ ಕ್ರಮ ಸಂಖ್ಯೆ:(3)ರ ದಿನಾಂಕ:29.06.2012ರ ಸರ್ಕಾರಿ ಆದೇಶದಲ್ಲಿ ಶ್ರೀಮತಿ ಜಿ.ರತ್ನಮಾಲ, ಉಪನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರಿಗೆ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳನ್ವಯ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆ ವಿಧಿಸಲಾಗಿರುತ್ತದೆ.

4. ಮೇಲೆ ಓದಲಾದ ಕ್ರಮ ಸಂಖ್ಯೆ:(4) ರಲ್ಲಿ ಅಪಾದಿತ ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ಜಾರಿ ಮಾಡಲಾಗಿದ್ದು, ಶ್ರೀಮತಿ ಜಿ.ರತ್ನಮಾಲ ರವರು ಓದಲಾದ ಕ್ರಮ ಸಂಖ್ಯೆ(5) ರಲ್ಲಿ ನೋಟೀಸಿಗೆ ಲಿಖಿತ ಉತ್ತರವನ್ನು ನೀಡಿ ಕರ್ನಾಟಕ ಉಚ್ಚ ನ್ಯಾಯಾಲಯ, ಸರ್ಕ್ಯೂಟ್ ಬೆಂಚ್, ಧಾರವಾಡ ಇಲ್ಲಿನ ಅರ್ಜಿ ಸಂಖ್ಯೆ:2693/2012ರಲ್ಲಿ ನ್ಯಾಯಾಲಯವು ಟ್ರಯಲ್ ಕೋರ್ಟ್‌ನ ತೀರ್ಪನ್ನು ಮೇಲ್ಮನವಿ ಇತ್ಯರ್ಥವಾಗುವವರೆಗೆ ಅಮಾನತ್ತಿನಲ್ಲಿಟ್ಟಿರುವುದರಿಂದ ಪಿಂಚಣಿ ಸೌಲಭ್ಯಗಳನ್ನು ಬಿಡುಗಡೆಗೊಳಿಸಲು ಕೋರಿರುತ್ತಾರೆ.

5. ಮೇಲೆ ಓದಲಾದ ಕ್ರಮ ಸಂಖ್ಯೆ:(6) ರ ಸರ್ಕಾರದ ಸುತ್ತೋಲೆಯ ಕಂಡಿಕೆ 3 ರಲ್ಲಿ "ಸಂವಿಧಾನ ಅನುಚ್ಛೇದ 311(2) ರಡಿಯಲ್ಲಿನ ಎರಡನೇ ಪರಂತುಕದ ಖಂಡ(ಎ)ಯು ಕ್ರಿಮಿನಲ್ ಆರೋಪದ ಮೇಲೆ ದೋಷಸಿದ್ಧಿಯಾಗುವಂತೆ ಮಾಡಿದ ನಡತೆಯ ಬಗ್ಗೆ ಹೇಳುತ್ತದೆಯಾದ್ದರಿಂದ ದೋಷಸಿದ್ಧಿಯಾಗಿರುವುದನ್ನು ನಿಲಂಬನದಲ್ಲಿಡುವ ಪ್ರಶ್ನೆ ಉದ್ಭವಿಸುವುದಿಲ್ಲ. ಆದ್ದರಿಂದ ಆಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ್ದಾನೆ ಅಥವಾ ಇತರ ವ್ಯವಹರಣೆ ಹೂಡಿದ್ದಾನೆ; ಅಥವಾ ಮೇಲಿನ ನ್ಯಾಯಾಲಯವು ಕ್ರಿಮಿನಲ್ ನ್ಯಾಯಾಲಯದ ದಂಡನೆ ಆದೇಶವನ್ನು ನಿಲಂಬನೆಯಲ್ಲಿಟ್ಟಿದೆ, ಅಥವಾ ಆತನ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾನೆ ಎಂಬ ಕಾರಣಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(i) ರನುಸಾರ ಕ್ರಮ ಜರುಗಿಸುವುದನ್ನು ತಡೆ ಹಿಡಿಯಬೇಕಾದ ಅಗತ್ಯವಿಲ್ಲ. ಇಂತಹ ಎಲ್ಲಾ ಸಂದರ್ಭಗಳಲ್ಲಿ ಸೂಕ್ತವಾದ ಕ್ರಮ ಎಂದರೆ, ಒಮ್ಮೆ ಒಬ್ಬ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ದಂಡನೆಗೆ ಗುರಿಯಾದರೆ, ಆತನು ಸಲ್ಲಿಸಿಬಹುದಾದ ಮೇಲ್ಮನವಿ ಇತ್ಯರ್ಥವಾಗುವವರೆಗೂ ಕಾಯದೆ ಸಂವಿಧಾನದ ಅನುಚ್ಛೇದ 311(2) ರಡಿಯಲ್ಲಿರುವ ಎರಡನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 14(i) ರನುಸಾರ ಶಿಸ್ತಿನ ಕ್ರಮ ಕೈಗೊಳತಕ್ಕದ್ದು. ಇಲ್ಲವಾದಲ್ಲಿ, ಕ್ರಿಮಿನಲ್ ನ್ಯಾಯಾಲಯದಲ್ಲಿ ತೀವ್ರ ಆರೋಪಕ್ಕಾಗಿ ದೋಷಸಿದ್ಧಿಯಾಗಿ ದಂಡನೆಗೆ ಗುರಿಯಾದಂತಹ ವ್ಯಕ್ತಿಯು ಸೇವೆಯಲ್ಲಿ ಮುಂದುವರಿಯಲು ಅವಕಾಶ ಕಲ್ಪಿಸಿದಂತಾಗುತ್ತದೆ. ಆದ್ದರಿಂದ, ಮೇಲ್ಮನವಿ ಆದೇಶವು ಇತ್ಯರ್ಥವಾಗುವುದನ್ನು ಕಾಯುವುದು ಸೂಕ್ತವಲ್ಲ. ಆದರೆ, ಒಂದು ವೇಳೆ ಆಪಾದಿತ ಸರ್ಕಾರಿ ನೌಕರನು ಮೇಲಿನ ನ್ಯಾಯಾಲಯದಲ್ಲಿ ಖುಲಾಸೆಯಾದರೆ, ಶಿಸ್ತು ಪ್ರಾಧಿಕಾರಿಯು ಆದೇಶವನ್ನು ಪರಿಷ್ಕರಿಸಬಹುದು. ಒಂದು ವೇಳೆ ಸರ್ಕಾರಿ ನೌಕರರನ್ನು ಪುನಃ ಸೇವೆಗೆ ತೆಗೆದುಕೊಂಡಲ್ಲಿ, ಆತನು ಸೇವೆಯಲ್ಲಿ ಮುಂದುವರಿದಿದ್ದರೆ ಅರ್ಹನಾಗಿರುತ್ತಿದ್ದಂತ ಎಲ್ಲ ಸೌಲಭ್ಯಗಳಿಗೂ ಹಕ್ಕುಳ್ಳವನಾಗುತ್ತಾನೆ" ಎಂದು ಸೂಚಿಸಲಾಗಿದೆ.

6. ಶ್ರೀಮತಿ ಜಿ.ರತ್ನಮಾಲ, ನಿವೃತ್ತ ಉಪ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಮೇಲಿನ ಕ್ರಿಮಿನಲ್ ಮೊಕದ್ದಮೆಯಲ್ಲಿ ಆರೋಪಗಳು ಸಾಬೀತಾಗಿದ್ದು, ವಿಶೇಷ ನ್ಯಾಯಾಲಯ, ಬಾಗಲಕೋಟೆ ಇವರು ಅಪಾದಿತ ಅಧಿಕಾರಿಗೆ 3 ವರ್ಷಗಳ ಸಾದಾ ಸೆರೆವಾಸ ಮತ್ತು ರೂ.3,000/-ದಂಡ ವಿಧಿಸಿರುವ ಹಿನ್ನೆಲೆಯಲ್ಲಿ ಇವರ ಸಂಪೂರ್ಣ ವಿಶ್ರಾಂತಿ ವೇತನವನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸಲು ಓದಲಾದ ಉಲ್ಲೇಖ(7)ರನ್ವಯ ಸರ್ಕಾರವು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯೊಡನೆ ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 153 ರಾಲೆಪ 2013, ಬೆಂಗಳೂರು, ದಿನಾಂಕ:28-10-2013.**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214(1)ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀಮತಿ ಜಿ.ರತ್ನಮಾಲ, ನಿವೃತ್ತ ಉಪ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ಸಂಪೂರ್ಣ ಮಾಸಿಕ ವಿಶ್ರಾಂತಿ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಶಾಶ್ವತವಾಗಿ ಹಿಂಪಡೆಯಲಾಗಿದೆ (withdrawn premanently)

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

**P.R. 1226**

## ಕಂದಾಯ ಸಚಿವಾಲಯ

**ವಿಷಯ:** ಟಿ. ನರಸೀಪುರ ತಾಲ್ಲೂಕು ಕಸಬಾ ಹೋಬಳಿ ಆಲಗೂಡು ಗ್ರಾಮದ ಸ.ನಂ. 361 ರಲ್ಲಿ ಟಿ. ನರಸೀಪುರ ತಾಲ್ಲೂಕು ಭಗೀರಥ ಉಪ್ಪಾರ ಜನ ಕಲ್ಯಾಣ ಟ್ರಸ್ಟ್ ಇವರಿಗೆ ಸಮುದಾಯ ಭವನ ನಿರ್ಮಾಣ ಮಾಡಲು ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ ಇವರ ಪತ್ರ ಸಂಖ್ಯೆ : ಎಲ್.ಎನ್.ಡಿ. (1) ಸಿ.ಆರ್. 740/2010–11, ದಿನಾಂಕ 26–10–2012, 17–12–2012 ಮತ್ತು 25–02–2013.
2. ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ ಇವರ ಪತ್ರ ಸಂಖ್ಯೆ : ಎಲ್.ಎನ್.ಡಿ. (1) ಸಿ.ಆರ್. 740/2010–11, ದಿನಾಂಕ 26–10–2012.
3. ಸರ್ಕಾರದ ಅಧಿಸೂಚನೆ ಸಂಖ್ಯೆ : ಆರ್‌ಡಿ 169 ಎಲ್‌ಜಿಎಂ 2012, ದಿನಾಂಕ 29–01–2013.

**ಪ್ರಸ್ತಾವನೆ:**

ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 31–5–2011ರ ಪತ್ರದಲ್ಲಿ, ಮೈಸೂರು ಜಿಲ್ಲೆ ಟಿ. ನರಸೀಪುರ ತಾಲ್ಲೂಕು, ಕಸಬಾ ಹೋಬಳಿ ಆಲಗೂಡು ಗ್ರಾಮದ ಸ.ನಂ. 361 ರಲ್ಲಿ 0.15 ಎಕರೆ ಪ್ರದೇಶವನ್ನು ಟಿ. ನರಸೀಪುರ ತಾಲ್ಲೂಕು ಭಗೀರಥ ಉಪ್ಪಾರ ಜನ ಕಲ್ಯಾಣ ಟ್ರಸ್ಟ್ ರವರಿಗೆ ಸಮುದಾಯ ಭವನ ನಿರ್ಮಾಣಕ್ಕಾಗಿ ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

2. ಜಿಲ್ಲಾಧಿಕಾರಿಗಳ ವರದಿಯನ್ವಯ ಆಲಗೂಡು ಗ್ರಾಮದ ಸ.ನಂ. 361 ರಲ್ಲಿ 1.02 ಎಕರೆ ಜಮೀನು ಸರ್ಕಾರಿ ಕಟ್ಟೆ ಶೀರ್ಷಿಕೆಯಲ್ಲಿ ಇದ್ದು ತನ್ನ ಮೂಲ ಸ್ವರೂಪವನ್ನು ಕಳೆದುಕೊಂಡಿರುತ್ತದೆ. ಅದರಂತೆ ಸರ್ಕಾರದ ಪತ್ರ ಸಂಖ್ಯೆ ಆರ್‌ಡಿ 145 ಎಲ್‌ಜಿಎಂ 2012 ದಿನಾಂಕ 14–2–2012 ರಲ್ಲಿ ನೀಡಲಾದ ಪೂರ್ವಾನುಮತಿಯನ್ವಯ ಸದರಿ ಜಮೀನನ್ನು ಕಟ್ಟೆ ಶೀರ್ಷಿಕೆಯಿಂದ ವಿಹಿತಗೊಳಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 68(1) ರನ್ವಯ ಪ್ರಾಥಮಿಕ ಅಧಿಸೂಚನೆಯನ್ನು ದಿನಾಂಕ 28–06–2012 ರಂದು ಜಿಲ್ಲಾಧಿಕಾರಿಗಳು ಹೊರಡಿಸಿರುತ್ತಾರೆ.

3. ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ದಿನಾಂಕ 26–10–2012ರ ಪತ್ರದಲ್ಲಿ ಸದರಿ ಜಮೀನನ್ನು ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ಕರ್ನಾಟಕ ಭೂ ಕಂದಾಯ ಕಲಂ 68(1) ರಡಿಯಲ್ಲಿ ನಮೂನೆ–27 ರಲ್ಲಿ ದಿನಾಂಕ 28.6.2012 ರಂದು ಹೊರಡಿಸಲಾಗಿದ್ದ ಅಧಿಸೂಚನೆಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲವಾದ್ದರಿಂದ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 68(5) ರಡಿಯಲ್ಲಿ ಅಂತಿಮ ಅಧಿಸೂಚನೆ ಹೊರಡಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

4. ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿನ ಸರ್ಕಾರದ ಅಧಿಸೂಚನೆ ದಿನಾಂಕ 29–01–2013 ರಲ್ಲಿ ಪ್ರಸ್ತಾಪಿತ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 68(5) ರಡಿಯಲ್ಲಿ ನಮೂನೆ–29 ರ ಅಂತಿಮ ಅಧಿಸೂಚನೆ ಹೊರಡಿಸಲಾಗಿದೆ.

5. ಪ್ರಸ್ತಾಪಿತ ಜಮೀನನ್ನು ಸರ್ಕಾರಿಕಟ್ಟೆ ಶೀರ್ಷಿಕೆಯಿಂದ ವಿಹಿತಗೊಳಿಸಿ ಅಂತಿಮ ಅಧಿಸೂಚನೆ ಹೊರಡಿಸಿರುವುದರಿಂದ ಈ ಜಮೀನನ್ನು ಟಿ.ನರಸೀಪುರ ತಾಲ್ಲೂಕು ಭಗೀರಥ ಉಪ್ಪಾರ ಜನ ಕಲ್ಯಾಣ ಟ್ರಸ್ಟ್ ರವರಿಗೆ ಮಂಜೂರು ಮಾಡಲು ಪರಿಶೀಲಿಸಲಾಗಿದೆ, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 169 ಎಲ್‌ಜಿಎಂ 2012, ಬೆಂಗಳೂರು, ದಿನಾಂಕ: 21–08–2013**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಜಿಲ್ಲೆ, ಟಿ. ನರಸೀಪುರ ತಾಲ್ಲೂಕು ಅಲಗೂಡು ಗ್ರಾಮದ ಸ.ನಂ. 361 ರಲ್ಲಿ 1.02 ಎಕರೆ ಜಮೀನಿನ ಪೈಕಿ 0.15 ಎಕರೆ ಜಮೀನನ್ನು 30 ವರ್ಷಗಳ ಗುತ್ತಿಗೆ ಆಧಾರದ ಮೇಲೆ ಟಿ. ನರಸೀಪುರ ತಾಲ್ಲೂಕು ಭಗೀರಥ ಉಪ್ಪಾರ ಜನ ಕಲ್ಯಾಣ ಟ್ರಸ್ಟ್ ರವರಿಗೆ ಸಮುದಾಯ ಭವನ ನಿರ್ಮಾಣಕ್ಕಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19 ರನ್ವಯ ಪ್ರಸ್ತುತ ಮಾರುಕಟ್ಟೆ ದರದ ಮೇಲೆ ಶೇಕಡ 10ರಷ್ಟನ್ನು ವಿಧಿಸಿ, ಪ್ರತಿ ಎರಡು ವರ್ಷಕ್ಕೆ ಶೇಕಡ 10ರಷ್ಟು ಹೆಚ್ಚಿಸುವ ಮತ್ತು ಇತರ ದರಗಳನ್ನು ವಿಧಿಸಿ ಮಂಜೂರು ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಲು ಆದೇಶಿಸಿದೆ.

1) ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
2) ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
3) ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
4) ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
5) ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
6) ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
7) ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
8) ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶಿವಲಿಂಗಯ್ಯ,**

ಪೀಠಾಧಿಕಾರಿ,

ಕಂದಾಯ ಇಲಾಖೆ. (ಭೂ ಮಂ–2)

**PR. 1239**
**SC. 100**

## ಕಂದಾಯ ಸಚಿವಾಲಯ

**ವಿಷಯ:** ಹಾವೇರಿ ಜಿಲ್ಲೆ, ಶಿಗ್ಗಾಂವ್ ತಾಲ್ಲೂಕು, ಚಂದಾಪುರ ಗ್ರಾಮದ ಸ.ನಂ. 145, 146 ಹಾಗೂ 147 ರಲ್ಲಿ 77.24 ಎಕರೆ ಜಮೀನನ್ನು ಕರ್ನಾಟಕ ವಿದ್ಯುತ್ ನಿಗಮಕ್ಕೆ ಸೋಲಾರ್ ಪವರ್ ಪ್ಲಾಂಟ್ ಉದ್ದೇಶಕ್ಕಾಗಿ 30 ವರ್ಷಗಳ ಅವಧಿಗೆ ಗುತ್ತಿಗೆಗೆ ನೀಡುವ ಬಗ್ಗೆ.

**ಓದಲಾಗಿದೆ:** 1. ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ರವರ ಪತ್ರ ಸಂಖ್ಯೆ : ಪ್ರಾಆಬೆ:ಭೂಮಿ/4/ಎಲ್‌ಜಿಎಲ್/22/2010-11, ದಿನಾಂಕ 09-09-2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ, ಇವರು ದಿನಾಂಕ 09-09-2010 ರಂದು ಹಾವೇರಿ ಜಿಲ್ಲೆ, ಶಿಗ್ಗಾಂವ್ ತಾಲ್ಲೂಕು, ಚಂದಾಪುರ ಗ್ರಾಮದ ಸ.ನಂ. 145, 146 ಹಾಗೂ 147 ರಲ್ಲಿ 77.24 ಎಕರೆ ಜಮೀನನ್ನು ಕರ್ನಾಟಕ ವಿದ್ಯುತ್ ನಿಗಮಕ್ಕೆ ಸೋಲಾರ್ ಪವರ್ ಪ್ಲಾಂಟ್ ಉದ್ದೇಶಕ್ಕಾಗಿ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಚಂದಾಪುರ ಗ್ರಾಮದ ಸ.ನಂ. 145ರ ಜಮೀನು ಸರ್ಕಾರಿ ಮುಫತ್ ಗಾಯರಾಣ ಎಂಬುದಾಗಿ ವರ್ಗೀಕೃತಗೊಂಡಿರುತ್ತದೆ. ಸ.ನಂ. 146 ರಲ್ಲಿ 14-21 ಎಕರೆ ಜಮೀನನ್ನು ಹುಲ್ಲುಗಾವಲು ಸಲುವಾಗಿ ಕಾಯ್ದಿರಿಸಲಾಗಿದೆ. ಇದೇ ಗ್ರಾಮದ ಸ.ನಂ. 147 ರಲ್ಲಿ 13-39 ಎಕರೆ ಜಮೀನು ಸರ್ಕಾರಿ ಪಡಾ ಎಂಬುದಾಗಿ ವರ್ಗೀಕೃತಗೊಂಡಿರುತ್ತದೆ. ಸದರಿ ಗ್ರಾಮದಲ್ಲಿ 1500 ಜಾನುವಾರುಗಳು ಇರುತ್ತವೆಂದು ಹಾಗೂ ಗ್ರಾಮಕ್ಕೆ 150 ಎಕರೆ ಗಾಯರಾಣ ಜಮೀನಿನ ಅವಶ್ಯಕತೆ ಇರುತ್ತದೆಂದು ಜಿಲ್ಲಾಧಿಕಾರಿಗಳು, ಹಾವೇರಿ ಇವರು ವರದಿಸಿರುತ್ತಾರೆ. ಸದರಿ ಗ್ರಾಮದಲ್ಲಿ 77-24 ಎಕರೆ ಗಾಯರಾಣ ಜಮೀನು ಲಭ್ಯವಿರುತ್ತದೆ. ಗ್ರಾಮದಲ್ಲಿ ಗಾಯರಾಣ ಜಮೀನು ಲಭ್ಯತೆ ಕಡಿಮೆ ಇದ್ದರೂ ಚಂದಾಪುರ ಮತ್ತು ಹಣಸಿಕಟ್ಟೆ ಗ್ರಾಮದಲ್ಲಿ ಜಾನುವಾರು ಮೇಯಿಸಲು ಅರಣ್ಯ ಇಲಾಖೆಯ ವಶದಲ್ಲಿರುವ ಸ.ನಂ. 117ರಲ್ಲಿ 159-22 ಎಕರೆ ಹಾಗೂ ಸ.ನಂ. 113ರಲ್ಲಿ 32-35 ಎಕರೆ ಜಮೀನು ಲಭ್ಯವಿರುತ್ತದೆಂದು ಜಿಲ್ಲಾಧಿಕಾರಿಗಳು ವರದಿಸಿರುತ್ತಾರೆ. ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ರವರು ಸಹ ಈ ಪ್ರದೇಶದಲ್ಲಿ ಮೇವಿನ ಸಮಸ್ಯೆ ಇರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಆದ್ದರಿಂದ ಜಿಲ್ಲಾಧಿಕಾರಿಯವರು ಹಾಗೂ ಪ್ರಾದೇಶಿಕ ಆಯುಕ್ತರುಗಳು ಕರ್ನಾಟಕ ವಿದ್ಯುತ್ ನಿಗಮಕ್ಕೆ 5 ಮೆ.ವಾ. ಸಾಮರ್ಥ್ಯದ ಸೌರ ವಿದ್ಯುತ್ ಘಟಕವನ್ನು ಸ್ಥಾಪಿಸುವ ಸಲುವಾಗಿ 77-24 ಎಕರೆ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 62 ಎಲ್‌ಜಿಡಿ 2010, ಬೆಂಗಳೂರು, ದಿನಾಂಕ: 30-10-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಹಾವೇರಿ ಜಿಲ್ಲೆ, ಶಿಗ್ಗಾಂವ್ ತಾಲ್ಲೂಕು, ಚಂದಾಪುರ ಗ್ರಾಮದ ಸ.ನಂ. 145, 146 ಹಾಗೂ 147 ರಲ್ಲಿ ಒಟ್ಟು 77.24 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4)ರಡಿಯಲ್ಲಿನ ಅವಕಾಶದಂತೆ ಗಾಯರಾಣ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(3)(ಬಿ)ರನ್ವಯ ಮಾರುಕಟ್ಟೆ ಬೆಲೆಯ ಶೇಕಡ 10ರಷ್ಟು ದರವನ್ನು ನಿಗದಿಪಡಿಸಿ ಹಾಗೂ ನಿಯಮಾನುಸಾರ ಇನ್ನಿತರ ದರಗಳನ್ನು ವಿಧಿಸಿ, ಪ್ರತಿ ಎರಡು ವರ್ಷಗಳಿಗೊಮ್ಮೆ ಶೇ.10ರಷ್ಟು ಗುತ್ತಿಗೆ ದರ ಹೆಚ್ಚಿಸುವ ಷರತ್ತಿಗೊಳಪಟ್ಟು, 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ಇವರಿಗೆ ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಜಿ. ಲಕ್ಷ್ಮೀನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ.
(ಭೂ ಮಂಜೂರಾತಿ-3)

**PR. 1240**
**SC. 25**

## ಕಂದಾಯ ಸಚಿವಾಲಯ

**ವಿಷಯ:** ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಕಸಬಾ ಹೋಬಳಿ, ಚೀಲನಹಳ್ಳಿ ಗ್ರಾಮದ ಸ.ನಂ.14 ರಲ್ಲಿ 20-00 ಎಕರೆ ಜಮೀನನ್ನು ಆಧುನಿಕ ವಧಾಗಾರ (ಕಸಾಯಿ ಖಾನೆ) ನಿರ್ಮಾಣ ಮಾಡಲು ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮಕ್ಕೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ : ಎಲ್‌ಎನ್‌ಡಿ/ ಸಿಆರ್/250/12-13, ದಿನಾಂಕ : 09-2-2013.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರು ದಿನಾಂಕ 09-02-2013 ರಂದು ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಕಸಬಾ ಹೋಬಳಿ, ಚೀಲನಹಳ್ಳಿ ಗ್ರಾಮದ ಸ.ನಂ.14 ರಲ್ಲಿ 20-00 ಎಕರೆ ಜಮೀನನ್ನು ಆಧುನಿಕ ವಧಾಗಾರ (ಕಸಾಯಿ ಖಾನೆ) ನಿರ್ಮಾಣ ಮಾಡಲು ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮಕ್ಕೆ ಮಂಜೂರು ಮಾಡುವ ಬಗ್ಗೆ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಕಸಬಾ ಹೋಬಳಿ, ಚೀಲನಹಳ್ಳಿ ಗ್ರಾಮದ ಸ.ನಂ.14ರಲ್ಲಿ 66–32 ಎಕರೆ ಜಮೀನು ಗೋಮಾಳ ಎಂದು ವರ್ಗೀಕೃತಗೊಂಡಿದ್ದು, ಈ ಜಮೀನಿನಲ್ಲಿ 20–00 ಎಕರೆ ಜಮೀನನ್ನು ಆಧುನಿಕ ವಧಾಗಾರ (ಕಸಾಯಿ ಖಾನೆ) ನಿರ್ಮಾಣ ಮಾಡಲು ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮಕ್ಕೆ ಮಂಜೂರು ಮಾಡುವ ಬಗ್ಗೆ ಸರ್ವೆ ಸ್ಕೆಚ್ ತಯಾರಿಸಿದ್ದು, ಸದರಿ ಸಂಸ್ಥೆಯು ಈ ಜಮೀನನ್ನು ವಧಾಗಾರ/ತ್ಯಾಜ್ಯ ವಸ್ತುಗಳ ವಿಲೇವಾರಿ ಘಟಕ/ಆಧುನಿಕ ಕಛೇರಿ/ಉದ್ಯಾನವನ/ಮಾರುಕಟ್ಟೆ ಶೆಡ್ ನಿರ್ಮಿಸಲು ಉಪಯೋಗಿಸಿಕೊಳ್ಳಲಿದ್ದಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 34 ಎಲ್‌ಜಿಟಿ 2013, ಬೆಂಗಳೂರು, ದಿನಾಂಕ: 12–12–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಕಸಬಾ ಹೋಬಳಿ, ಚೀಲನಹಳ್ಳಿ ಗ್ರಾಮದ ಸ.ನಂ.14 ರಲ್ಲಿ 20–00 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4)ರಡಿಯಲ್ಲಿನ ಅವಕಾಶದಂತೆ ಗಾಯರಾಣ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ಜಮೀನಿನ ಮಾರ್ಗಸೂಚಿ ಬೆಲೆಯ ಶೇ. 10 ರಷ್ಟು ಹಾಗೂ ನಿಯಮಾನುಸಾರ ಇತರ ಶುಲ್ಕಗಳನ್ನು ವಿಧಿಸಿ, ಆಧುನಿಕ ವಧಾಗಾರ (ಕಸಾಯಿ ಖಾನೆ) ನಿರ್ಮಾಣಕ್ಕಾಗಿ ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಜಿ. ಲಕ್ಷ್ಮೀನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ.
(ಭೂ ಮಂಜೂರಾತಿ–3)

**PR. 1263**
**SC. 25**

## ಆರ್ಥಿಕ ಸಚಿವಾಲಯ

**ವಿಷಯ :** 2014ನೇ ಸಾಲಿನ ಅವಧಿಗೆ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗದೀಕರಣ ಪಡೆಯುವ ಸೌಲಭ್ಯವನ್ನು ನಿಯತಗೊಳಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ : ಆಇ 5 ಸೇನಿಸೇ 2012, ದಿನಾಂಕ : 14–06–2012.

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 118(2) ಸೌಲಭ್ಯ ಪಡೆಯುವ ಸಲುವಾಗಿ, ಪ್ರತೀ ಕ್ಯಾಲೆಂಡರ್ ವರ್ಷದಲ್ಲಿ (ಆಯಾ ವರ್ಷದ ಜನವರಿ 1 ರಿಂದ ಡಿಸೆಂಬರ್ 31ರ ಒಳಗೆ) 15 ದಿನಗಳಿಗೆ ಮೀರದ ಗಳಿಕೆ ರಜೆಯನ್ನು ಅಧ್ಯರ್ಪಿಸಿ, ರಜಾ ವೇತನಕ್ಕೆ ಸಮನಾದ ನಗಧೀಕರಣ ಪಡೆಯಬಹುದಾದ ಸೌಲಭ್ಯವನ್ನು ದಿನಾಂಕ : 01–01–2013ರಿಂದ ಜಾರಿಗೊಳಿಸಲಾಗಿದೆ.

2014ನೇ ಸಾಲಿನ ಅವಧಿಗೆ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗಧೀಕರಣ ಪಡೆಯುವ ಸೌಲಭ್ಯವನ್ನು ನಿಯತಗೊಳಿಸುವುದು ಅವಶ್ಯಕವೆಂದು ಸರ್ಕಾರವು ಈ ಬಗ್ಗೆ ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಇ 9 ಸೇನಿಸೇ 2013, ಬೆಂಗಳೂರು, ದಿನಾಂಕ : 28–11–2013**

2014ನೇ ಸಾಲಿನ ಅವಧಿಗೆ ಗರಿಷ್ಠ 15 ದಿನಗಳಿಗೆ ಮೀರದ ಗಳಿಕೆ ರಜೆಯನ್ನು ಅಧ್ಯರ್ಪಿಸಿ ರಜಾ ವೇತನಕ್ಕೆ ಸಮನಾದ ನಗಧೀಕರಣ ಸೌಲಭ್ಯ ಪಡೆಯುವ ಯೋಜನೆಯನ್ನು 01–01–2014 ರಿಂದ ಜಾರಿಗೊಳಿಸಿ ಈ ಕೆಳಕಂಡಂತೆ ನಿಯತಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿ/ನೌಕರರ ಸಮೂಹ | ಮುಂಚಿತವಾಗಿ ಒಂದು ತಿಂಗಳ ನೋಟಿಸ್ ನೀಡಿ 2014ನೇ ಸಾಲಿನ ಅವಧಿಗೆ ನಗಧೀಕರಣ ಸೌಲಭ್ಯ ಪಡೆಯುವ ಅವಧಿ |
|---|---|---|
| 1. | ಗ್ರೂಪ್ 'ಡಿ' ಸಮೂಹ | ಅವರ ಇಚ್ಛೆಯಂತೆ 2014ರ ಕ್ಯಾಲೆಂಡರ್ ವರ್ಷದ ಯಾವುದೇ ತಿಂಗಳಿನಲ್ಲಿ |
| 2. | ಉಳಿದ ಸಮೂಹ (ಎ.ಬಿ.ಸಿ) | ಅವರ ಇಚ್ಛೆಯಂತೆ ಏಪ್ರಿಲ್ 2014ರಿಂದ ಡಿಸೆಂಬರ್ 2014ರ ವರೆಗಿನ ಯಾವುದೇ ತಿಂಗಳಿನಲ್ಲಿ |

2. ಮೇಲೆ ವಿಧಿಸಿದ ನಿಬಂಧನೆಯು ಏನೇ ಇದ್ದಾಗ್ಯೂ ಜನವರಿಯಿಂದ ಮಾರ್ಚ್ 2014ರಲ್ಲಿ ನಿವೃತ್ತಿ ಹೊಂದುವ ಎಲ್ಲಾ ಅರ್ಹ ನೌಕರರು/ಅಧಿಕಾರಿಗಳು, ಅವರು ನಿವೃತ್ತಿ ಹೊಂದುವ ತಿಂಗಳಲ್ಲಿ ನಗಧೀಕರಣ ಪ್ರಯೋಜನ ಪಡೆಯಲು ಅರ್ಹರಾಗಿರುತ್ತಾರೆ.

3. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 118ರಲ್ಲಿ ನಿಯಮಿಸಿರುವಂತಹ ಗಳಿಕೆ ರಜೆ ನಗಧೀಕರಣ ನಿಯಂತ್ರಣಕ್ಕೆ ಸಂಬಂಧಿಸಿದ ಇತರೆ ಷರತ್ತುಗಳು ಅನ್ವಯವಾಗುತ್ತದೆ.

4. ಈ ಆದೇಶವು ಈಗಾಗಲೇ ಈ ಸೌಲಭ್ಯ ವಿಸ್ತರಣೆಯಾಗಿರುವ ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಸಂಸ್ಥೆಗಳ ನೌಕರರಿಗೂ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಆಲಿಸ್ ಗೊನ್ಸಾಲ್ವಿಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು–1).

**PR. 08**
**SC-50**

**ಆರ್ಥಿಕ ಸಚಿವಾಲಯ**

**ವಿಷಯ :** ಕೊಡಗು ಜಿಲ್ಲೆಯ ಮಡಿಕೇರಿಯಲ್ಲಿ ನಡೆಯಲಿರುವ ಅಖಿಲ ಭಾರತ 80ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಕೊಡಗು ಜಿಲ್ಲೆಯ ರಾಜ್ಯ ಸರ್ಕಾರಿ ನೌಕರರ ಒಂದು ದಿನದ ವೇತನವನ್ನು ವಂತಿಗೆಯಾಗಿ ಕಟಾವು ಮಾಡುವ ಬಗ್ಗೆ.

**ಓದಲಾಗಿದೆ :**

1. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರ ಪತ್ರ ಸಂಖ್ಯೆ : 953/2013–14, ದಿನಾಂಕ : 06–12–2013.
2. ಕೊಡಗು ಜಿಲ್ಲೆಯ ಜಿಲ್ಲಾಧಿಕಾರಿಯವರ ಪತ್ರ ಸಂಖ್ಯೆ : ಎಂಎಜಿ./ಕ.ಸಾ.ಸ./2013–14, ದಿನಾಂಕ : 13–12–2013.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರ ದಿನಾಂಕ : 06–12–2013ರ ಮನವಿ ಪತ್ರದಲ್ಲಿ ಹಾಗೂ ಮೇಲೆ (2)ರಲ್ಲಿ ಓದಲಾದ ಕೊಡಗು ಜಿಲ್ಲಾಧಿಕಾರಿಯವರ ದಿನಾಂಕ : 13–12–2013ರ ಪತ್ರದಲ್ಲಿ ಕೊಡಗು ಜಿಲ್ಲೆಯ ಮಡಿಕೇರಿಯಲ್ಲಿ 2014ನೇ ಜನವರಿ ಮಾಹೆಯ 7,8 ಹಾಗೂ 9 ರಂದು "ಅಖಿಲ ಭಾರತ 80ನೇ ಕನ್ನಡ ಸಾಹಿತ್ಯ ಸಮ್ಮೇಳನ" ವನ್ನು ನಡೆಸಲಾಗುತ್ತಿರುವುದರಿಂದ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಕೊಡಗು ಜಿಲ್ಲಾ ಶಾಖೆಯ ಕಾರ್ಯಕಾರಿ ಸಮಿತಿಯು ಸಾಹಿತ್ಯ ಸಮ್ಮೇಳನಕ್ಕೆ ಜಿಲ್ಲೆಯ ಸರ್ಕಾರಿ ನೌಕರರ ಒಂದು ದಿನದ ವೇತನವನ್ನು ವಂತಿಗೆ ರೂಪದಲ್ಲಿ ನೀಡಲು ನಿರ್ಣಯ ಕೈಗೊಂಡಿರುವುದರಿಂದ, ಸದರಿ ಜಿಲ್ಲೆಯ ರಾಜ್ಯ ಸರ್ಕಾರಿ ನೌಕರರ ಡಿಸೆಂಬರ್ 2013ರ ಮಾಹೆಯ ವೇತನದಲ್ಲಿ ಒಂದು ದಿನದ ವೇತನವನ್ನು ಹೆಚ್.ಆರ್.ಎಂ.ಎಸ್. ಮೂಲಕ ಕಟಾವುಗೊಳಿ ಅಖಿಲ ಭಾರತ 80ನೇ ಕನ್ನಡ ಸಾಹಿತ್ಯ ಸಮ್ಮೇಳನದ ಲೆಕ್ಕಶೀರ್ಷಿಕೆಗೆ ಜಮಾಗೊಳಿಸುವಂತೆ ಸರ್ಕಾರವನ್ನು ಕೋರಲಾಗಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ : ಆಇ 32 ಎಸ್‌ಆರ್‌ಪಿ 2013, ಬೆಂಗಳೂರು, ದಿನಾಂಕ : 13ನೇ ಡಿಸೆಂಬರ್, 2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭಗಳ ಹಿನ್ನೆಲೆಯಲ್ಲಿ, 2014ರ ಜನವರಿ ಮಾಹೆಯ ದಿನಾಂಕ : 7,8 ಹಾಗೂ 9 ರಂದು ಕೊಡಗು ಜಿಲ್ಲೆಯ ಮಡಿಕೇರಿಯಲ್ಲಿ ನಡೆಯಲಿರುವ "80ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಕೊಡಗು" ಜಿಲ್ಲಾ ರಾಜ್ಯ ಸರ್ಕಾರಿ ನೌಕರರ ಡಿಸೆಂಬರ್ 2013ರ ತಿಂಗಳ ವೇತನದಲ್ಲಿ ಒಂದು ದಿನದ ವೇತನವನ್ನು ವಂತಿಗೆ ರೂಪದಲ್ಲಿ ಕಟಾಯಿಸಲು ಸರ್ಕಾರವು ಈ ಮೂಲಕ ಮಂಜೂರಾತಿ ನೀಡಿದೆ. ಹೀಗೆ ಕಟಾಯಿಸಲಾಗುವ ಒಟ್ಟು ಮೊತ್ತವನ್ನು ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ ಇವರಿಗೆ ಚೆಕ್ಕಿನ ಮೂಲಕ ಖಜಾನೆ ಅಧಿಕಾರಿಗಳು ಸಂದಾಯ ಮಾಡುವ ವಿಧಿ ವಿಧಾನಗಳು ಈ ಕೆಳಗಿನಂತೆ ಇವೆ :–

ಅ) ನೌಕರರ ಒಂದು ದಿನದ ವೇತನ ವಂತಿಗೆಯನ್ನು ಡಿಸೆಂಬರ್ 2013ರ ತಿಂಗಳ ವೇತನದ ಬಿಲ್ಲಿನಲ್ಲಿ ಕಟಾವುಗೊಳಿಸುವ ವಸೂಲು ಮಾಡಲು ಆಯಾ ಕಛೇರಿ ಮುಖ್ಯಾಧಿಕಾರಿಗಳು ಮತ್ತು ಖಜಾನಾಧಿಕಾರಿಗಳು ಅಧಿಕಾರ ಪಡೆದಿರುತ್ತಾರೆ.

ಆ) ಒಂದು ದಿನದ ವೇತನವನ್ನು ವಂತಿಗೆಯಾಗಿ ಕೊಡಲಿಚ್ಚಿಸದ ನೌಕರರು ತಮ್ಮ ಅಸಮ್ಮತಿಯನ್ನು ಸಂಬಂಧಪಟ್ಟ ಬಡವಾಡೆ ಅಧಿಕಾರಿಗಳಿಗೆ ಲಿಖಿತ ಮೂಲಕ ಸಲ್ಲಿಸತಕ್ಕದ್ದು ಮತ್ತು ಅಂತಹ ನೌಕರರು ಲಿಖಿತ ಪತ್ರವನ್ನು 2013ರ ಡಿಸೆಂಬರ್ ತಿಂಗಳಿನ ಸಂಬಳದ ಬಿಲ್ಲನ್ನು ಖಜಾನೆಗೆ ಸಲ್ಲಿಸುವ ದಿನಾಂಕದ ಒಳಗಾಗಿ ಸಲ್ಲಿಸಿದ್ದಲ್ಲಿ ಮಾತ್ರ ಅಂತಹ ನೌಕರನ/ಳ ಒಂದು ದಿನದ ವೇತನವನ್ನು ಡಿಸೆಂಬರ್ 2013ರ ತಿಂಗಳಿನ ವೇತನ ಬಿಲ್ಲಿನಲ್ಲಿ ಕಟಾವು ಮಾಡತಕ್ಕದ್ದಲ್ಲ.

ಇ) ಪ್ರತಿಯೊಬ್ಬ ನೌಕರನ/ಳ ವೇತನದಲ್ಲಿ ಈ ಕುರಿತು ಕಟಾಯಿಸಿದ ವೇತನದ ಬಿಲ್ಲಿನಲ್ಲಿ ಅವರ ಹೆಸರಿನ ಎದುರಿನಲ್ಲಿ "80ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕಾಗಿ ವಂತಿಗೆ" ಎಂದು ಪ್ರತ್ಯೇಕ ಅಂಕಣದಲ್ಲಿ ಕಾಣಿಸಬೇಕು ಮತ್ತು ಸಮಗ್ರ ವೇತನ ಬಿಲ್ಲಿನಲ್ಲಿ ಕಡಿತಗೊಳಿಸಿದ ಒಟ್ಟು ಮೊತ್ತವನ್ನು ವೇತನ ಬಿಲ್ಲಿನ ಮುಖ ಪುಟದಲ್ಲಿ "80ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕಾಗಿ ವಂತಿಗೆ" ಎಂಬುದಾಗಿ ಸ್ಪಷ್ಟವಾಗಿ ನಮೂದಿಸಬೇಕು. ಜಿಲ್ಲಾ ಖಜಾನೆ ಅಧಿಕಾರಿಗಳು ಒಟ್ಟು ಮೊತ್ತವನ್ನು ಈ ಕೆಳಗೆ ನಮೂದಿಸಿರುವ ಲೆಕ್ಕ ಶೀರ್ಷಿಕೆಗೆ ವರ್ಗಾವಣೆ ಜಮಾ ಮಾಡುವ ಮೂಲಕ ಬಿಲ್ಲನ್ನು ಪಾವತಿ ಮಾಡಬೇಕು. ವೇತನ ಬಟವಾಡೆ ಮಾಡಲು ನಿವ್ವಳ ಮೊತ್ತಕ್ಕೆ ಚೆಕ್ಕನ್ನು ಬಟವಾಡೆ ಅಧಿಕಾರಿಗೆ ಅವರು ನೀಡಬೇಕು.

ಈ) "80ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕಾಗಿ ಕೊಡಗು ಜಿಲ್ಲೆಯ ರಾಜ್ಯ ಸರ್ಕಾರಿ ಅಧಿಕಾರಿ/ನೌಕರರ ಒಂದು ದಿನದ ವೇತನವನ್ನು ಕಟಾಯಿಸಿ ಸದರಿ ಮೊತ್ತವನ್ನು ಲೆಕ್ಕ ಶೀರ್ಷಿಕೆ "8658–00–102–4–28 ಕೊಡಗು ಜಿಲ್ಲೆಯ ಮಡಿಕೇರಿಯಲ್ಲಿ ನಡೆಯಲಿರುವ "80ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ವಂತಿಗೆ" ಯಡಿ ಜಮಾ ಮಾಡತಕ್ಕದ್ದು. ಹೀಗೆ ಜಮಾ ಮಾಡುವ ಒಟ್ಟು ಮೊತ್ತಕ್ಕೆ ಜಿಲ್ಲಾ ಖಜಾನೆ ಅಧಿಕಾರಿಯು ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ಇವರಿಗೆ ಕ್ರೋಢೀಕೃತ ಮೊಬಲಗಿನ ಚೆಕ್ಕನ್ನು ನೀಡುವುದು.

ಉ) 2013ರ ಡಿಸೆಂಬರ್ ತಿಂಗಳಿನಲ್ಲಿ ಸ್ವೀಕರಿಸಲಾದ ವೇತನ ಬಿಲ್ಲುಗಳ ನಿರ್ವಹಣೆಯನ್ನು 2014ರ ಜನವರಿ 10ನೇ ದಿನಾಂಕದೊಳಗೆ ಪೂರೈಸಬೇಕು. ಜನವರಿ ತಿಂಗಳು ಅಂತ್ಯಗೊಂಡ ನಂತರ ಪಾವತಿ ಮಾಡಿದ ಬಿಲ್ಲುಗಳ ಪ್ರಕರಣಗಳಲ್ಲಿ ಅವುಗಳನ್ನು ಪಾವತಿ ಮಾಡಿದ ಒಂದು ವಾರದೊಳಗೆ ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ಕೊಡಗು ಇವರಿಗೆ ಚೆಕ್ಕನ್ನು ಕಳುಹಿಸಬೇಕು ಹಾಗೂ ಹೀಗೆ ಕೈಗೊಂಡ ಕ್ರಮದ ಬಗ್ಗೆ ಒಂದು ಪ್ರತಿಯನ್ನು ಆರ್ಥಿಕ ಇಲಾಖೆಗೆ ಕಳುಹಿಸತಕ್ಕದ್ದು.

(ಊ) ಮಹಾಲೇಖಪಾಲರು ನೀಡಿದ ಅಧಿಕಾರ ಪತ್ರದ ಮೇಲೆ ತಮ್ಮ ವೇತನವನ್ನು ಖಜಾನೆಯಿಂದ ಪಡೆಯುವ ಅಧಿಕಾರಿಗಳೂ ಸಹ ಮೇಲೆ ಕಾಣಿಸಿದ ಕ್ರಮವನ್ನು ಪಾಲಿಸುವುದು.

ಋ) ಜಿಲ್ಲಾಧಿಕಾರಿ, ಕೊಡಗು ಜಿಲ್ಲೆ ಅವರು ಈ ವಂತಿಗೆ ಹಣವನ್ನು ಉದ್ದೇಶಿತ ಕಾರ್ಯಕ್ಕೆ ಬಳಸಿಕೊಳ್ಳುವ ಅಧಿಕಾರ ಹೊಂದಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುಂದರ ರಾಜ ಗುಪ್ತ**

ಸರ್ಕಾರದ ಜಂಟಿ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–2).

PR. 09

SC-50

## LABOUR SECRETARIAT

**SUB :** Implementation of the Indo-German Development Cooperation (GIZ) on Social Security Benefits for the unorganized workers in Karnataka and extension of implementation period from December 2013 to March 2014.

**READ :** 1. GO No. LD 21 LMW 2012, Bangalore, Dt: 20-04-2012

2. Ministry of Labour and Employment, GOI, Letter No. M-21021/45/2008 - RW,Dt: 7-11-2013

**Preamble:**

The Department of Labour, GoK and German Development Cooperation (GIZ) have been implementing a pilot project on Social Security Benefits for Unorganised Workers in six districts of Karnataka since 2009 under the bilateral agreement between GoI and the Government of Germany. This project has pioneered the concept of single-window approach to facilitate the access to social security benefits among unorganised worker households by setting up 250 Worker Facilitation Centers (WFCs) at Grama Panchayat and urban ward level in these six districts viz., (1) Bangalore Rural and Urban, (2) Mysore, (3) Bellary, (4) Gulbarga and (5) Dakshina Kannada.

The project was approved by State Level Co-Ordination Committee on 30-01-2008. Hence approval of the Cabinet was solicited to implement the above project and to authorize the Secretary, Labour Department to sign the MoU. Accordingly Implementation agreement was entered into between Government of Karnataka (GOK) and German International Co-operation (GIZ) on 17-12-2008. Since 2009, the Department of Labour, Government of Karnataka has been implementing this project on Social Secur.ity Benefits in Karnataka State with financial and technical collaboration with the German International Co-operation.

Government of Karnataka vide their order dated 20.04.2012 read at (1) above have accorded approval to extend the period of implementation of SSP(K) project in Karnataka from December 2011 to November 2013 without any additional financial burden to State Government.

A mid-term impact study conducted by the Institute for Social and Economic Change, Bangalore and the University of Oxford, UK in June 2012 has concluded that WFCs do improve the outreach, access and utilisation of government social security schemes. The results of the impact study were presented before the State Level Steering Committee (SLSC), in its meeting held under the Chairmanship of the Chief Secretary, GoK on 3rd July 2012. The SLSC decided for up-scaling the WFC concept in all the districts of Karnataka at one taluk per district.

The present term of the ongoing project will come to an end by November 2013. Now the GIZ (Germany) intends to extend the project till 31st March, 2014, at no extra cost to the Government of Karnataka, as it is fully financed by GIZ. As already agreed upon the activities the project will be carried out without any interruption.

Ministry of Labour and Employment, New Delhi vide their letter dated 7.11.2013 read at (2) above has conveyed its no objection at no extra cost to the Government of Karnataka for the extension of the term of the ongoing project SSP(K) from 1st December 2013 to 31st March 2014.

Hence this order.

### Government Order No. LD 135 LWA 2013, Bangalore dated: 28-11-2013

In view of the above facts, approval of the Government is accorded to extend the period of implementation of "Indo German International Cooperation (GIZ) project on Social Security Benefits for the un organized workers in Karnataka from 1st December 2013 to 31st March 2014 without any financial burden to the State Government. The other terms and conditions of the original implementation agreement will remain the same.

By order and in the name of the Governor of Karnataka,
**Prabhudeva**
Under Secretary to Govt.
Labour Department.

**PR-10**
**SC-200**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ, 2013 ರ ಅಧ್ಯಾಯ 6(13)(ಜೆ)ರ ಪ್ರಕಾರ ಕುಟುಂಬದ ಹಿರಿಯ ಮಹಿಳಾ ಸದಸ್ಯರನ್ನು ಪಡಿತರ ಚೀಟಿಯಲ್ಲಿ ಕುಟುಂಬದ ಮುಖ್ಯಸ್ಥರನ್ನಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಕೇಂದ್ರ ಸರ್ಕಾರದ ವಿಶೇಷ ಪ್ರಕಟಣೆ ಪತ್ರದ ದಿನಾಂಕ : 5–7–2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಕೇಂದ್ರ ಸರ್ಕಾರದ ವಿಶೇಷ ಪ್ರಕಟಣೆಯಲ್ಲಿ ಪ್ರತಿಯೊಬ್ಬ ಪ್ರಜೆಗೂ ಆಹಾರ ಧಾನ್ಯಗಳು ಕಡ್ಡಾಯವಾಗಿ ಸಿಗುವ ದೃಷ್ಟಿಯಿಂದ ರಾಷ್ಟ್ರೀಯ ಆಹಾರ ಭದ್ರತೆ 2013ರ ಅಧ್ಯಾದೇಶವನ್ನು ಜಾರಿಗೊಳಿಸಿದ್ದು, ಅಧ್ಯಾಯ 6(13)(ಜೆ)ರ ಪ್ರಕಾರ ಕುಟುಂಬದ ಹಿರಿಯ ಮಹಿಳಾ ಸದಸ್ಯರನ್ನು ಪಡಿತರ ಚೀಟಿಯಲ್ಲಿ ಕುಟುಂಬದ ಮುಖ್ಯಸ್ಥರನ್ನಾಗಿ ನೇಮಿಸುವುದು ಕಡ್ಡಾಯಗೊಳಿಸಿದೆ. ಬಹುತೇಕ ಪಡಿತರ ಚೀಟಿಗಳನ್ನು ಕುಟುಂಬದ ಅತ್ಯಂತ ಹಿರಿಯ ಪುರುಷ ಸದಸ್ಯರ ಹೆಸರಿನಲ್ಲಿ ನೀಡಲಾಗುತ್ತಿದೆ. ಪ್ರಸ್ತುತದಲ್ಲಿ ಮುಂದೆ ನೀಡಲಾಗುವ ಹೊಸ ಪಡಿತರ ಚೀಟಿ/ಪಡಿತರ ಚೀಟಿಗಳಲ್ಲಿ ಸೇರ್ಪಡೆ/ಬೇರ್ಪಡೆ ಹಾಗೂ ತಿದ್ದುಪಡಿ ಇತ್ಯಾದಿ ಮಾಡುವ ಸಂದರ್ಭಗಳಲ್ಲಿ ಕಡ್ಡಾಯವಾಗಿ ಇನ್ನು ಮುಂದೆ ಕುಟುಂಬದ ಮಹಿಳಾ ಹಿರಿಯ ಸದಸ್ಯರನ್ನು ಕುಟುಂಬದ ಮುಖ್ಯಸ್ಥರೆಂದು ಪರಿಗಣಿಸಲು ತೀರ್ಮಾನಿಸಲಾಗಿದೆ. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆನಾಸ 20 ಆರ್‌ಪಿಆರ್ 2013, ಬೆಂಗಳೂರು, ದಿನಾಂಕ : 31–10–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ, 2013ರ ಅಧ್ಯಾಯ 6(13(ಜೆ)ರ ಪ್ರಕಾರ ಕುಟುಂಬದ ಹಿರಿಯ ಮಹಿಳಾ ಸದಸ್ಯರನ್ನು ಪಡಿತರ ಚೀಟಿಯಲ್ಲಿ ಕುಟುಂಬದ ಮುಖ್ಯಸ್ಥರನ್ನಾಗಿ ನೇಮಿಸಬೇಕಾಗಿರುವುದರಿಂದ, ಇನ್ನು ಮುಂದೆ ಹೊಸ ಪಡಿತರ ಚೀಟಿಗಳನ್ನು ನೀಡುವ ಸಂದರ್ಭಗಳಲ್ಲಿ ಮತ್ತು ಪಡಿತರ ಚೀಟಿಗಳಲ್ಲಿ ಸೇರ್ಪಡೆ/ಬೇರ್ಪಡೆ ಹಾಗೂ ತಿದ್ದುಪಡಿ ಇತ್ಯಾದಿ ಮಾಡುವ ಸಂದರ್ಭಗಳಲ್ಲಿ ಕಡ್ಡಾಯವಾಗಿ ಕುಟುಂಬದ ಮಹಿಳಾ ಹಿರಿಯ ಸದಸ್ಯರನ್ನು ಕುಟುಂಬದ ಮುಖ್ಯಸ್ಥರೆಂದು ಪರಿಗಣಿಸಿ, ಪಡಿತರ ಚೀಟಿಗಳನ್ನು ನೀಡುವಂತೆ ಹಾಗೂ ಆಹಾರ ಇಲಾಖೆಯ ವೆಬ್‌ಸೈಟನ ತಂತ್ರಾಂಶದಲ್ಲಿ ಸೂಕ್ತ ಮಾರ್ಪಾಡನ್ನು ಮಾಡುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ.

**PR. 17**
**SC-05**

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ವಿಷಯ :** ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ, 2013ನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಕೇಂದ್ರ ಸರ್ಕಾರದ ವಿಶೇಷ ಪ್ರಕಟಣೆ ಪತ್ರದ ದಿನಾಂಕ : 5–7–2013.
2. ಸರ್ಕಾರಿ ಆದೇಶ ಸಂಖ್ಯೆ : ಆನಾಸ 43 ಡಿಆರ್‌ಎ 2013, ದಿನಾಂಕ : 15–06–2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಕೇಂದ್ರ ಸರ್ಕಾರದ ವಿಶೇಷ ಪ್ರಕಟಣೆಯಲ್ಲಿ ಪ್ರತಿಯೊಬ್ಬ ಪ್ರಜೆಗೂ ಆಹಾರ ಧಾನ್ಯಗಳು ಕಡ್ಡಾಯವಾಗಿ ಸಿಗುವ ದೃಷ್ಟಿಯಿಂದ ರಾಷ್ಟ್ರೀಯ ಆಹಾರ ಭದ್ರತೆ 2013ರ ಅಧ್ಯಾದೇಶವನ್ನು ಜಾರಿಗೊಳಿಸಿದ್ದು, ಇದನ್ನು ರಾಜ್ಯ ಸರ್ಕಾರವು ರಾಜ್ಯದಲ್ಲಿ ಅನುಷ್ಠಾನಗೊಳಿಸಲು ಸಹಮತಿಸಿರುತ್ತದೆ. ನಂತರದಲ್ಲಿ ಸದರಿ ಅಧ್ಯಾದೇಶವನ್ನು ಸಂಸತ್ತು ಅಂಗೀಕರಿಸಿದ್ದು, ಕಾಯ್ದೆಯ ರೂಪವನ್ನು ಪಡೆದಿರುತ್ತದೆ.

ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ರಾಜ್ಯ ಸರ್ಕಾರವು ಜುಲೈ 2013 ರಿಂದ ರಾಜ್ಯಾದ್ಯಂತ ಜಾರಿಗೆ ಬರುವಂತೆ "ಅನ್ನ ಭಾಗ್ಯ" ಯೋಜನೆಯನ್ನು ಪ್ರಾರಂಭಿಸಿದ್ದು, ಅದರಲ್ಲಿ ಏಕ ಸದಸ್ಯ ಹೊಂದಿರುವ ಪಡಿತರ ಚೀಟಿಗೆ 10 ಕಿಲೋ ಆಹಾರ ಧಾನ್ಯಗಳನ್ನು, ದ್ವಿಸದಸ್ಯರನ್ನು ಹೊಂದಿರುವ ಪಡಿತರ ಚೀಟಿಗೆ 20 ಕಿಲೋ ಆಹಾರ ಧಾನ್ಯವನ್ನು ಮತ್ತು ಮೂರು ಅಥವಾ ಅದಕ್ಕಿಂತ ಹೆಚ್ಚು ಸದಸ್ಯರನ್ನು ಹೊಂದಿರುವ ಪಡಿತರ ಚೀಟಿಗೆ ಗರಿಷ್ಠ 30 ಕಿಲೋ ಆಹಾರ ಧಾನ್ಯವನ್ನು ನೀಡಲಾಗುತ್ತಿದೆ. ಆದರೆ, ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆಯ ಪ್ರಕಾರ ಪಡಿತರ ಚೀಟಿಯ ಪ್ರತಿಯೊಬ್ಬ ಸದಸ್ಯರಿಗೆ ಮಾಹೆಯಾನ 5 ಕಿಲೋ ಆಹಾರ ಧಾನ್ಯಗಳನ್ನು ನೀಡುವುದು ಕಡ್ಡಾಯವಾಗಿರುತ್ತದೆ. ಪ್ರಸ್ತುತ ಸರ್ಕಾರದ ಆದೇಶದಲ್ಲಿ 5 ಮತ್ತು ಅದಕ್ಕಿಂತ ಹೆಚ್ಚು ಸದಸ್ಯರನ್ನು ಹೊಂದಿರುವ ಪಡಿತರ ಚೀಟಿಗೆ ಗರಿಷ್ಠ 30 ಕಿಲೋ ಆಹಾರ ಧಾನ್ಯಗಳನ್ನು ಸೀಮಿತಗೊಳಿಸಲಾಗಿದೆ.

ಆದರೆ, ಆಹಾರ ಭದ್ರತೆ ಕಾಯ್ದೆಯ ಪ್ರಕಾರ ಕುಟುಂಬದ ಸದಸ್ಯರನ್ನಾಧರಿಸಿ ಕುಟುಂಬದ ಪ್ರತಿ ಸದಸ್ಯರಿಗೆ 5 ಕಿಲೋ ಆಹಾರ ಧಾನ್ಯಗಳನ್ನು ಕಡ್ಡಾಯವಾಗಿ ನೀಡಬೇಕಾಗಿರುವುದರಿಂದ, 6 ಮತ್ತು ಅದಕ್ಕಿಂತ ಹೆಚ್ಚಿನ ಸದಸ್ಯರನ್ನು ಒಳಗೊಂಡಿರುವ ಕುಟುಂಬದ ಪಡಿತರ ಚೀಟಿಗಳಿಗೆ ಆಹಾರ ಧಾನ್ಯಗಳನ್ನು ಯೂನಿಟ್ ಆಧಾರದ ಮೇಲೆ ಹೆಚ್ಚುವರಿ ಮಾಡುವುದು ಕಡ್ಡಾಯವಾಗಿರುತ್ತದೆ. ಆದ್ದರಿಂದ, ಒಂದು, ಎರಡು ಮತ್ತು 3 ಕ್ಕಿಂತ ಹೆಚ್ಚು ಹಾಗೂ 6 ಕ್ಕಿಂತ ಕಡಿಮೆ ಸದಸ್ಯರನ್ನು ಹೊಂದಿರುವ ಪಡಿತರ ಚೀಟಿಗೆ ಪ್ರಸ್ತುತ ಜಾರಿಯಲ್ಲಿರುವ ರಾಜ್ಯ ಸರ್ಕಾರದ ಆದೇಶದಂತೆಯೇ ಅಂದರೆ, ಏಕ ಸದಸ್ಯ ಹೊಂದಿರುವ ಪಡಿತರ ಚೀಟಿಗೆ 10 ಕಿಲೋ ಆಹಾರ ಧಾನ್ಯಗಳನ್ನು, ದ್ವಿಸದಸ್ಯರನ್ನು ಹೊಂದಿರುವ ಪಡಿತರ ಚೀಟಿಗೆ 20 ಕಿಲೋ ಆಹಾರ ಧಾನ್ಯವನ್ನು ಮತ್ತು ಮೂರು ಅಥವಾ ಅದಕ್ಕಿಂತ ಹೆಚ್ಚು ಸದಸ್ಯರನ್ನು ಹೊಂದಿರುವ ಪಡಿತರ ಚೀಟಿಗೆ ಗರಿಷ್ಠ 30 ಕಿಲೋ ಆಹಾರ ಧಾನ್ಯವನ್ನು ಹಾಗೂ 7 ಮತ್ತು ಅದಕ್ಕಿಂತ ಹೆಚ್ಚು ಕುಟುಂಬ ಸದಸ್ಯರನ್ನು ಹೊಂದಿರುವ ಪಡಿತರ ಚೀಟಿಗೆ ಪ್ರತಿ ಹೆಚ್ಚುವರಿ ಸದಸ್ಯರಿಗೆ 5 ಕಿಲೋ ಆಹಾರ ಧಾನ್ಯಗಳನ್ನು ನೀಡಲು ತೀರ್ಮಾನಿಸಲಾಗಿದೆ. ಅದರಂತೆ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆನಾಸ 20 ಆರ್‌ಪಿಆರ್ 2013, ಬೆಂಗಳೂರು, ದಿನಾಂಕ : 31–10–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ, 2013ನ್ನು ರಾಜ್ಯದಲ್ಲಿ ಸಮರ್ಪಕವಾಗಿ ಅನುಷ್ಠಾನಗೊಳಿಸಲು 6 ಸದಸ್ಯರಿರುವ ಕುಟುಂಬಕ್ಕೆ ಪ್ರಸ್ತುತ ರಾಜ್ಯವು 30 ಕೆ.ಜಿ. ಆಹಾರ ಧಾನ್ಯವನ್ನು ನೀಡುತ್ತಿದ್ದು, 7 ಸದಸ್ಯರು ಅಥವಾ ಅದಕ್ಕಿಂತ ಹೆಚ್ಚು ಸದಸ್ಯರಿರುವ ಕುಟುಂಬಗಳಿಗೆ ಅನ್ವಯವಾಗುವಂತೆ ಪ್ರತಿ ಹೆಚ್ಚುವರಿ ಸದಸ್ಯರಿಗೆ ಹೆಚ್ಚುವರಿಯಾಗಿ 5 ಕಿಲೋ ಆಹಾರ ಧಾನ್ಯಗಳನ್ನು ನವೆಂಬರ್ 1, 2013 ರಿಂದ ಜಾರಿಗೆ ಬರುವಂತೆ ನೀಡಲು ಆದೇಶಿಸಿದೆ. ಇನ್ನುಳಿದಂತೆ, ಸರ್ಕಾರದ ಆದೇಶ ಸಂಖ್ಯೆ : ಆನಾಸ 43 ಡಿಆರ್‌ಎ 2013, ದಿನಾಂಕ : 15–6–2013ರಲ್ಲಿನ ಆದೇಶವನ್ನೇ ಮುಂದುವರೆಸಲಾಗಿದೆ.

ಆಯುಕ್ತರು, ಆನಾಸ ಇಲಾಖೆಯವರು 6 ಹಾಗೂ ಅದಕ್ಕಿಂತ ಹೆಚ್ಚುವರಿ ಸದಸ್ಯರನ್ನು ಹೊಂದಿರುವ ಪಡಿತರ ಚೀಟಿಗಳ ತಾಲ್ಲೂಕು/ಜಿಲ್ಲಾವಾರು ಅಂಕಿ–ಅಂಶದ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದು ಹಾಗೂ ಆಹಾರ ಇಲಾಖೆಯ ವೆಬ್ ಸೈಟನ ತಂತ್ರಾಂಶದಲ್ಲಿ ಈ ವಿವರಗಳನ್ನು ಕೂಡಲೇ ಅಳವಡಿಸಲು ಸೂಕ್ತವಾಗಿ ಮಾರ್ಪಡಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ.

**PR. 18**
**SC-05**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2013–14 ನೇ ಸಾಲಿನ ಎನ್.ಆರ್.ಎಲ್.ಎಂ ಒಂದನೇ ಕಂತಿನ ರಾಜ್ಯದ ಪಾಲಿನ ಅನುದಾನವನ್ನು ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸಂಸ್ಥೆಗೆ (ಕೆಎಸ್‌ಆರ್‌ಎಲ್‌ಪಿಎಸ್) ಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, (ಅಜೀವಿಕಾ) ನವದೆಹಲಿ ಇವರ ಪತ್ರದ ಸಂಖ್ಯೆ ಜೆ–12022/01/2013(6ಎ), (6ಬಿ) ಮತ್ತು (6ಸಿ) ದಿನಾಂಕ:–16.07.2013.

2) ಸರ್ಕಾರದ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 360 ವೆಚ್ಚ–6 2013 ದಿನಾಂಕ. 23.10.2013.

**ಪ್ರಸ್ತಾವನೆ:**

ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಎಸ್‌ಜಿಎಸ್‌ವೈ ಯೋಜನೆಯನ್ನು ಪುನರ್‌ರಚಿಸಿ **"ಆಜೀವಿಕಾ"** (ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಮಿಷನ್ (ಎನ್‌ಆರ್‌ಎಲ್‌ಎಂ) ಜಾರಿಗೆ ತಂದಿದೆ. ಇದರಂತೆ ರಾಜ್ಯ ಸರ್ಕಾರವು, ಎನ್‌ಆರ್‌ಎಲ್‌ಎಂ ಯೋಜನೆಯನ್ನು ರಾಜ್ಯಾದಂತ ಹಂತ ಹಂತವಾಗಿ ಅನುಷ್ಠಾನಗೊಳಿಸಲು ತೀರ್ಮಾನಿಸಿದೆ. ಈ ಯೋಜನೆಯನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸೊಸೈಟಿ (ಕೆಎಸ್‌ಆರ್‌ಎಲ್‌ಪಿಎಸ್) ಸ್ಥಾಪಿಸಲಾಗಿದೆ. **"ಆಜೀವಿಕಾ"**(ಎನ್‌ಆರ್‌ಎಲ್‌ಎಂ) ಯೋಜನೆಯನ್ನು ರಾಜ್ಯದಲ್ಲಿ **"ಸಂಜೀವಿನಿ"** ಹೆಸರಿನಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ.

ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸೊಸೈಟಿಯಿಂದ ಅನುಷ್ಠಾನಗೊಳಿಸುತ್ತಿರುವ **"ಸಂಜೀವಿನಿ"**(ಆಜೀವಿಕಾ) ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅನುದಾನವನ್ನು 75 : 25 ರ ಅನುಪಾತದಲ್ಲಿ ಭರಿಸುವುದು.

ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, (ಅಜೀವಿಕಾ) ನವದೆಹಲಿ ಇಲ್ಲಿಯ ಅಧಿಕಾರಯುಕ್ತ ಸಮಿತಿಯು (Empowered Committee) ದಿನಾಂಕ:25.06.2013 ರಂದು ನಡೆಸಿದ ಸಭೆಯಲ್ಲಿ 2013–14ನೇ ಸಾಲಿಗೆ ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸೊಸೈಟಿಯು ಸಲ್ಲಿಸಿದ ವಾರ್ಷಿಕ ಕ್ರಿಯಾ ಯೋಜನೆ (ಎಎಪಿ) ಯಲ್ಲಿ ಪ್ರಸ್ತಾಪಿಸಿರುವ ವಿವಿಧ ಚಟುವಟಿಕೆಗಳಿಗೆ ಎನ್‌ಆರ್‌ಎಲ್‌ಎಂ ಯೋಜನೆಗೆ ಒಟ್ಟು ಅನುದಾನ ರೂ.15807.04 ಲಕ್ಷಕ್ಕೆ ಅನುಮೋದನೆ ನೀಡಿದ್ದು, 2013–14ನೇ ಸಾಲಿನಲ್ಲಿ ರೂ.12652 ಲಕ್ಷಗಳನ್ನು ಮಾತ್ರ ಬಿಡುಗಡೆಗೆ ಮಾಡಲು ಅನುಮೋದಿಸಿದೆ. ರೂ.12652 ಲಕ್ಷಗಳ ಪೈಕಿ ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರದ ಪಾಲು ಕ್ರಮವಾಗಿ ರೂ.9489 ಲಕ್ಷಗಳು ಹಾಗೂ ರೂ.3163 ಲಕ್ಷಗಳು ಆಗಿರುತ್ತದೆ.

ಎನ್‌ಆರ್‌ಎಲ್‌ಎಂ ಅನುಷ್ಠಾನಕ್ಕಾಗಿ ಕೇಂದ್ರ ಗಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿಯು ಒದಲಾಗಿದೆ (1)ರ ಪತ್ರದಲ್ಲಿ ಪ್ರಥಮ ಕಂತಿನ ಅನುದಾನ ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸೊಸೈಟಿಗೆ **"ಎನ್‌ಆರ್‌ಎಲ್‌ಎಂ"** ಕ್ರಮವಾಗಿ ರೂ.1088 ಲಕ್ಷ, ರೂ.631.04 ಲಕ್ಷ ಮತ್ತು ರೂ.456.96 ಲಕ್ಷ ಒಟ್ಟು **ರೂ.2176 ಲಕ್ಷಗಳನ್ನು** ಬಿಡುಗಡೆ ಮಾಡಿದೆ. ಈ ಅನುದಾನ ಬಿಡುಗಡೆಯಾದ ಒಂದು ತಿಂಗಳಲ್ಲಿ ರಾಜ್ಯ ಸರ್ಕಾರ ತನ್ನ ಪಾಲಿನ ಅನುದಾನ (ಶೇ.25)ವನ್ನು ಬಿಡುಗಡೆ ಮಾಡಬೇಕೆಂದು ಸೂಚಿಸಿದೆ. ಇದರಂತೆ ರಾಜ್ಯ ಸರ್ಕಾರವು ಕೇಂದ್ರ ಸರ್ಕಾರ ಬಿಡುಗಡೆ ಮಾಡಿರುವ ರೂ.2176 ಲಕ್ಷಗಳ ಅನುದಾನಕ್ಕನುಗುಣವಾಗಿ ತನ್ನ ಪಾಲಿನ ಅನುದಾನ (ಶೇ.25) **ರೂ.725.33 ಲಕ್ಷ (ರೂ. ಏಳು ನೂರ ಇಪ್ಪತ್ತೈದು ಲಕ್ಷದ ಮೂವತ್ತಮೂರು ಸಾವಿರ)** ಗಳನ್ನು ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸೊಸೈಟಿಗೆ ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 52 ಎಸ್‌ಜಿವೈ 2013 ಬೆಂಗಳೂರು, ದಿನಾಂಕ: 19.11.2013**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸೊಸೈಟಿ (ಕೆಎಸ್‌ಆರ್‌ಎಲ್‌ಪಿಎಸ್) ವತಿಯಿಂದ **"**ಸಂಜೀವಿನಿ**"** / ಎನ್‌ಆರ್‌ಎಲ್‌ಎಂ ಯೋಜನೆಯನ್ನು ಅನುಷ್ಠಾನಗೊಳಿಸಲು 2013–14ನೇ ಸಾಲಿಗೆ ರಾಜ್ಯದ ಪಾಲಿನ ಶೇ:25 ರ ಅನುದಾನ **ರೂ.725.33 ಲಕ್ಷ (ರೂ. ಏಳು ನೂರ ಇಪ್ಪತ್ತೈದು ಲಕ್ಷದ ಮೂವತ್ತಮೂರು ಸಾವಿರ)** ಗಳನ್ನು ಕೆಎಸ್‌ಆರ್‌ಎಲ್‌ಪಿಎಸ್ ಗೆ ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು :**

1. ರಾಜ್ಯದ ಆಯವ್ಯಯದಲ್ಲಿ 2013–14ನೇ ಸಾಲಿಗೆ ರಾಜ್ಯದ ಅನುದಾನ ಭರಿಸಲು ಒದಗಿಸಿರುವ ಅನುದಾನದ ಪ್ರಧಾನ ಲೆಕ್ಕಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ(ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಪ್ರಾಜೆಕ್ಟ್ (ಎನ್‌ಆರ್‌ಎಲ್‌ಎಂ)) 2013–14 ಲಿಂಕ್ ಕೋಡ್ 2501–01–198–6–01 (ಹೊಸ ಕೋಡ್ 2501–00–101–0–05).
2. ಅಪರ ಅಭಿಯಾನ ನಿರ್ದೇಶಕರು, ಕೆಎಸ್‌ಆರ್‌ಎಲ್‌ಪಿಎಸ್, ಬೆಂಗಳೂರು ಇವರು ರುಜು ಮಾಡಿದ ಸ್ವೀಕೃತ ರಸೀದಿ (payees receipt) ನ್ನು ಸರ್ಕಾರಕ್ಕೆ ಸಲ್ಲಿಸುವುದು. ನಂತರ ಸ್ವೀಕೃತ ರಸೀದಿ (payees receipt) ಗೆ ನಿರ್ದೇಶಕರು(ಸ್ವಉಕಾ) ಹಾಗು ಪ.ನಿ ಸರ್ಕಾರದ ಜಂಟಿ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರು ಮೇಲುರುಜು ಮಾಡುವುದು. ಉಪ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಬೆಂಗಳೂರು, ಇವರು ಅನುದಾನವನ್ನು ಅಭಿಯಾನ ನಿರ್ದೇಶಕರು, ಕೆಎಸ್‌ಆರ್‌ಎಲ್‌ಪಿಎಸ್,ಬೆಂಗಳೂರು, ಇವರ ಹೆಸರಿನಲ್ಲಿ ಸೆಳೆಯುವುದು.
3. ಮೇಲ್ಕಂಡ ಅನುದಾನವನ್ನು ಸಂಜೀವಿನಿ / ಎನ್‌ಆರ್‌ಎಲ್‌ಎಂ ಯೋಜನೆಯನ್ನು ಅನುಷ್ಠಾನಗೊಳಿಸಲು ಭರಿಸತಕ್ಕದ್ದು.
4. ಮೇಲ್ಕಂಡ ರಾಜ್ಯದ ಪಾಲಿನ ಅನುದಾನವನ್ನು ಈಗಾಗಲೇ ಎನ್‌ಆರ್‌ಎಲ್‌ಎಂ ಯೋಜನೆಗಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿ ಲೆಕ್ಕಪತ್ರ ನಿರ್ವಹಿಸತಕ್ಕದ್ದು.
5. ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿಯಿಂದ ಅನುಮೋದಿತವಾಗಿರುವ ಕೆಎಸ್‌ಆರ್‌ಎಲ್‌ಪಿಎಸ್ ಸಂಸ್ಥೆಯ ವಾರ್ಷಿಕ ಕ್ರಿಯಾ ಯೋಜನೆಯಲ್ಲಿ ಎನ್‌ಆರ್‌ಎಲ್‌ಪಿ ಯೋಜನೆಗಾಗಿ ಸೂಚಿಸಿರುವ ಚಟುವಟಿಕೆಗಳಿಗೆ ಮಾತ್ರ ಅನುದಾನವನ್ನು ಉಪಯೋಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ (ವೆಚ್ಚ–6) ಟಿಪ್ಪಣಿ ಸಂಖ್ಯೆ:ಆಇ 360 ವೆಚ್ಚ–6 2013 ದಿನಾಂಕ. 23.10.2013 ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ.

PR.1251 ಸರ್ಕಾರದ ಜಂಟಿ ಕಾರ್ಯದರ್ಶಿ,

SC.10 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2013–14 ನೇ ಸಾಲಿನ ಎನ್.ಆರ್.ಎಲ್.ಪಿ ಒಂದನೇ ಕಂತಿನ ರಾಜ್ಯದ ಪಾಲಿನ ಅನುದಾನವನ್ನು ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸಂಸ್ಥೆಗೆ (ಕೆಎಸ್ಆರ್ಎಲ್ಪಿಎಸ್) ಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, (ಆರ್ ಎಲ್ ವಿಭಾಗ) ನವದೆಹಲಿ ಇವರ ಪತ್ರದ ಸಂಖ್ಯೆ ಜೆ–12022/ 01/ 2013 (6ಡಿ) ದಿನಾಂಕ:–16.07.2013.

2) ಆರ್ಥಿಕ ಇಲಾಖೆಯ (ವೆಚ್ಚ–6) ಟಿಪ್ಪಣಿ ಸಂಖ್ಯೆ:ಆಇ 360 ವೆಚ್ಚ–6 2013 ದಿನಾಂಕ. 23.10.2013.

**ಪ್ರಸ್ತಾವನೆ :**

ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಎಸ್‌ಜಿಎಸ್‌ವೈ ಯೋಜನೆಯನ್ನು ಪುನರ್‌ರಚಿಸಿ **"ಆಜೀವಿಕಾ"** (ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಮಿಷನ್ (ಎನ್ಆರ್ಎಲ್ಎಂ) ಯೋಜನೆಯನ್ನು ಜಾರಿಗೆ ತಂದಿದೆ. ಇದರಂತೆ ರಾಜ್ಯ ಸರ್ಕಾರವು ಎನ್ಆರ್ಎಲ್ಎಂ ಯೋಜನೆಯನ್ನು ರಾಜ್ಯಾದಂತ ಹಂತ ಹಂತವಾಗಿ ಅನುಷ್ಠಾನಗೊಳಿಸಲು ತೀರ್ಮಾನಿಸಿದೆ. ಈ ಯೋಜನೆಯನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನ ಸೊಸೈಟಿ(ಕೆಎಸ್ಆರ್ಎಲ್ಪಿಎಸ್) ಸ್ಥಾಪಿಸಲಾಗಿದೆ. **"ಆಜೀವಿಕಾ"**(ಎನ್ಆರ್ಎಲ್ಎಂ) ಯೋಜನೆಯನ್ನು ರಾಜ್ಯದಲ್ಲಿ **"ಸಂಜೀವಿನಿ"** ಹೆಸರಿನಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸೊಸೈಟಿಯಿಂದ ಅನುಷ್ಠಾನಗೊಳಿಸುತ್ತಿರುವ **"ಸಂಜೀವಿನಿ"**(ಆಜೀವಿಕಾ) ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅನುದಾನವನ್ನು 75 : 25 ರ ಅನುಪಾತದಲ್ಲಿ ಭರಿಸಬೇಕಾಗಿದೆ.

ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, (ಅಜೀವಿಕಾ) ನವದೆಹಲಿ ಇಲ್ಲಿಯ ಅಧಿಕಾರಯುಕ್ತ ಸಮಿತಿಯು(Empowered Committee) ದಿನಾಂಕ:25.06.2013 ರಂದು ನಡೆಸಿದ ಸಭೆಯಲ್ಲಿ 2013–14ನೇ ಸಾಲಿಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸೊಸೈಟಿಯು ಸಲ್ಲಿಸಿದ ವಾರ್ಷಿಕ ಕ್ರಿಯಾ ಯೋಜನೆ (ಎಎಪಿ) ಯಲ್ಲಿ ಪ್ರಸ್ತಾಪಿಸಿರುವ ವಿವಿಧ ಚಟುವಟಿಕೆಗಳಿಗೆ ಸಂಬಂದಿಸಿದಂತೆ **ಎನ್ಆರ್ಎಲ್ಪಿಯಡಿ** ಒಟ್ಟು ರೂ.3115 ಲಕ್ಷಗಳ ಮೊತ್ತದ ಹಂಚಿಕೆಗೆ ಅನುಮೋದನೆ ನೀಡಿದೆ. ಈ ಮೊತ್ತದಲ್ಲಿ ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರದ ಪಾಲು ಕ್ರಮವಾಗಿ ರೂ.2336/– ಲಕ್ಷ ಹಾಗೂ ರೂ.779/– ಲಕ್ಷ ಆಗಿರುತ್ತದೆ. ಎನ್ಆರ್ಎಲ್ಪಿಯನ್ನು ಪ್ರಥಮ ಹಂತದಲ್ಲಿ ರಾಜ್ಯದ ಕೆಳಕಂಡ **5 ಜಿಲ್ಲೆಗಳ 20 ತಾಲ್ಲೂಕು (ಬ್ಲಾಕ್) ಗಳಲ್ಲಿ** ಅನುಷ್ಠಾನಗೊಳಿಸಲಾಗುವುದು.

1. ಮೈಸೂರು – ಹೆಚ್.ಡಿ ಕೋಟೆ, ಹುಣಸೂರು, ನಂಜನಗೂಡು ಮತ್ತು ಟೀ.ನರಸೀಪುರ
2. ತುಮಕೂರು – ಪಾವಗಡ, ಸಿ.ಎನ್ ಹಳ್ಳಿ, ಮಧುಗಿರಿ ಮತ್ತು ಶಿರಾ
3. ಗದಗ – ಶಿರಹಟ್ಟಿ, ನರಗುಂಧ, ಗದಗ, ಮುಂಡರಗಿ ಮತ್ತು ರೋಣ
4. ಕೊಪ್ಪಳ – ಯಲ್ಬುರ್ಗ, ಕುಷ್ಠಗಿ ಮತ್ತು ಕೊಪ್ಪಳ
5. ಉತ್ತರ ಕನ್ನಡ – ಅಂಕೋಳ, ಶಿರಸಿ, ಕುಮುಟ ಮತ್ತು ಯಲ್ಲಾಪುರ

ಎನ್ಆರ್ಎಲ್ಪಿ ಅನುಷ್ಠಾನಕ್ಕಾಗಿ ಕೇಂದ್ರ ಗಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿಯು ಓದಲಾಗಿದೆ (1) ರ ಪತ್ರದಲ್ಲಿ ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸೊಸೈಟಿಗೆ ತನ್ನ ಪಾಲಿನ ಪ್ರಥಮ ಕಂತಿನ ಅನುದಾನ ರೂ.1167.94 ಲಕ್ಷಗಳನ್ನು ಬಿಡುಗಡೆ ಮಾಡಿ, ಅನುದಾನ ಬಿಡುಗಡೆಯಾದ ಒಂದು ತಿಂಗಳಲ್ಲಿ ರಾಜ್ಯ ಸರ್ಕಾರ ತನ್ನ ಪಾಲಿನ ಶೇ.25 ರಷ್ಟು ಅನುದಾನವನ್ನು ಬಿಡುಗಡೆ ಮಾಡಬೇಕೆಂದು ಸೂಚಿಸಿದೆ. ಇದರನ್ವಯ ರಾಜ್ಯ ಸರ್ಕಾರ ತನ್ನ ಪಾಲಿನ ಅನುದಾನ **ರೂ.389.31** ಲಕ್ಷ ಬಿಡುಗಡೆ ಮಾಡಬೇಕಿದೆ. ಇದರ ಬಿಡುಗಡೆಗಾಗಿ ಆರ್ಥಿಕ ಇಲಾಖೆಯು ಓದಲಾಗಿದೆ (2) ರಲ್ಲಿ ರಾಜ್ಯದ ಪಾಲಿನ ಒಟ್ಟಾರೆ ಅನುದಾನ ರೂ.1114.66 ಒದಗಿಸಿ ಬಿಡುಗಡೆ ಮಾಡಲು ಸಹಮತಿಸಿದೆ. ಆದ ಕಾರಣ ರಾಜ್ಯದ ಪಾಲಿನ ಅನುದಾನ **ರೂ.389.31** ಲಕ್ಷ ಎನ್ಆರ್ಎಲ್ಪಿ ಅನುಷ್ಠಾನಕ್ಕಾಗಿ ಬಿಡುಗಡೆ ಮಾಡಬೇಕಾಗಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ :ಗ್ರಾಅಪ 51 ಎಸ್‌ಜಿವೈ 2013 ಬೆಂಗಳೂರು, ದಿನಾಂಕ: 19:11:2013**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ರಾಜ್ಯ ಸರ್ಕಾರವು, ಎನ್ಆರ್ಎಲ್ಪಿ ಯೋಜನೆಯನ್ನು ರಾಜ್ಯದ 5 ಜಿಲ್ಲೆಗಳ 20 ತಾಲ್ಲೂಕು (ಬ್ಲಾಕ್) ಗಳಲ್ಲಿ ಅನುಷ್ಠಾನಗೊಳಿಸಲು ರಾಜ್ಯದ ಪಾಲಿನ ಅನುದಾನ **ರೂ. 389.31 ಲಕ್ಷ (ಮುನ್ನೂರ ಎಂಭತ್ತೊಂಬತ್ತು ಲಕ್ಷದ ಮೂವತ್ತೊಂದು ಸಾವಿರ ಮಾತ್ರ)** ಗಳನ್ನು ಜೀವನೋಪಾಯ ಸಂವರ್ಧನಾ ಸೊಸೈಟಿ(ಕೆಎಸ್ಆರ್ಎಲ್ಪಿಎಸ್) ಬೆಂಗಳೂರು ಇವರಿಗೆ ಕೆಳಕಂಡ ಷರತ್ತುಗಳನ್ವಯ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು :**

1. ರಾಜ್ಯದ ಆಯವ್ಯಯದಲ್ಲಿ 2013–14ನೇ ಸಾಲಿಗೆ ರಾಜ್ಯದ ಅನುದಾನ ಭರಿಸಲು ಎನ್ಆರ್ಎಲ್ಎಂ ಯೋಜನೆಗಾಗಿ ಒದಗಿಸಿರುವ ಅನುದಾನದ ಪ್ರಧಾನ ಲೆಕ್ಕಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ

ಯೋಜನೆ(ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಪ್ರಾಜೆಕ್ಟ್ (ಎನ್‌ಆರ್‌ಎಲ್‌ಎಂ)) 2013–14 ಲಿಂಕ್ ಕೋಡ್ 2501–01–198–6–01 (ಹೊಸ ಕೋಡ್ 2501–00–101–0–05) ರಿಂದ ಭರಿಸುವುದು.

2. ಅಪರ ಅಭಿಯಾನ ನಿರ್ದೇಶಕರು, ಕೆಎಸ್‌ಆರ್‌ಎಲ್‌ಪಿಎಸ್, ಬೆಂಗಳೂರು ಇವರು ರುಜು ಮಾಡಿದ ಸ್ವೀಕೃತ ರಸೀದಿ (payees receipt) ನ್ನು ಸರ್ಕಾರಕ್ಕೆ ಸಲ್ಲಿಸುವುದು. ನಂತರ ಸ್ವೀಕೃತ ರಸೀದಿ (payees receipt) ಗೆ ನಿರ್ದೇಶಕರು(ಸ್ವಉಕಾ) ಹಾಗೂ ಪ.ನಿ ಸರ್ಕಾರದ ಜಂಟಿ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಮೇಲುರುಜು ಮಾಡುವುದು. ಉಪ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು ಇವರು ಅನುದಾನವನ್ನು ಅಭಿಯಾನ ನಿರ್ದೇಶಕರು, ಕೆಎಸ್‌ಆರ್‌ಎಲ್‌ಪಿಎಸ್, ಬೆಂಗಳೂರು ಇವರ ಹೆಸರಿನಲ್ಲಿ ಸೆಳೆಯುವುದು.

3. ಮೇಲ್ಕಂಡ ಅನುದಾನವನ್ನು ರಾಜ್ಯದ ಕೆಳಕಂಡ 5 ಜಿಲ್ಲೆಗಳ 20 ತಾಲ್ಲೂಕುಗಳಲ್ಲಿ ಅನುಷ್ಠಾನಗೊಳಿಸಲು ಮಾತ್ರ ಉಪಯೋಗಿಸತಕ್ಕದ್ದು.
   1. ಮೈಸೂರು – ಹೆಚ್.ಡಿ ಕೋಟೆ, ಹುಣಸೂರು, ನಂಜನಗೂಡು ಮತ್ತು ಟೀ.ನರಸೀಪುರ
   2. ತುಮಕೂರು – ಪಾವಗಡ, ಸಿ.ಎನ್ ಹಳ್ಳಿ, ಮಧುಗಿರಿ ಮತ್ತು ಶಿರಾ
   3. ಗದಗ – ಶಿರಹಟ್ಟಿ, ನರಗುಂಧ, ಗದಗ, ಮುಂಡರಗಿ ಮತ್ತು ರೋಣ
   4. ಕೊಪ್ಪಳ – ಯಲ್ಬುರ್ಗ, ಕುಷ್ಠಗಿ ಮತ್ತು ಕೊಪ್ಪಳ
   5. ಉತ್ತರ ಕನ್ನಡ – ಅಂಕೋಳ, ಶಿರಸಿ, ಕುಮುಟ ಮತ್ತು ಯಲ್ಲಾಪುರ

4. ಎನ್‌ಆರ್‌ಎಲ್‌ಪಿ ಯೋಜನೆಯಡಿ ಸೆಳೆದ ರಾಜ್ಯದ ಪಾಲಿನ ಅನುದಾನವನ್ನು ಈಗಾಗಲೇ ಎನ್‌ಆರ್‌ಎಲ್‌ಪಿ ಯೋಜನೆಗಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿ ಲೆಕ್ಕಪತ್ರ ನಿರ್ವಹಿಸತಕ್ಕದ್ದು.

5. ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿಯಿಂದ ಅನುಮೋದಿತವಾಗಿರುವ ಕೆಎಸ್‌ಆರ್‌ಎಲ್‌ಪಿಎಸ್ ಸಂಸ್ಥೆಯ ವಾರ್ಷಿಕ ಕ್ರಿಯಾ ಯೋಜನೆಯಲ್ಲಿ ಎನ್‌ಆರ್‌ಎಲ್‌ಪಿ ಯೋಜನೆಗಾಗಿ ಸೂಚಿಸಿರುವ ಚಟುವಟಿಕೆಗಳಿಗೆ ಮಾತ್ರ ಅನುದಾನವನ್ನು ಉಪಯೋಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ (ವೆಚ್ಚ–6) ಟಿಪ್ಪಣಿ ಸಂಖ್ಯೆ:ಆಇ 360 ವೆಚ್ಚ–6 2013 ದಿನಾಂಕ. 23.10.2013 ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ.
ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು.

**PR.1252**

**SC.10**

## ಸಹಕಾರ ಸಚಿವಾಲಯ

**ವಿಷಯ:** ಸಮಾಪನೆಗೊಂಡ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಶಿವಪುರ ತಾ:ಕೊಪ್ಪಳ ಇದರ ಸರ್ಕಾರಿ ಸಾಲ ಬಡ್ಡಿ ಮತ್ತು ಷೇರು ಮೊತ್ತಗಳನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಸ.ಸಂ.ನಿ/ ಸಮಾಪನೆ–1/09/2011–12, ದಿ:14.3.2012, ದಿ:20.4.2013 ಹಾಗೂ ದಿನಾಂಕ:20.06.2013

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರಗಳಲ್ಲಿ ಸಮಾಪನೆಗೊಂಡ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಶಿವಪುರ ತಾ:ಕೊಪ್ಪಳ ಇದರ ಸರ್ಕಾರಿ ಸಾಲ, ಬಡ್ಡಿ ಮತ್ತು ಷೇರು ಹೀಗೆ **ಒಟ್ಟು ರೂ 92,880/–** ಮನ್ನಾ ಮಾಡುವಂತೆ ಸಹಕಾರ ಸಂಘಗಳ ನಿಬಂಧಕರು ಸರ್ಕಾರವನ್ನು ಕೋರಿರುತ್ತಾರೆ.

ಮುಂದುವರೆದು ಸಮಾಪನೆಗೊಂಡಿರುವ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಶಿವಪುರ ತಾ:ಕೊಪ್ಪಳ ಇದರ 2008–09ನೇ ಸಾಲಿನ ಅಡಿಟ್ ವರದಿಯಲ್ಲಿ ತಿಳಿಸಿರುವಂತೆ ಸಂಘದ ಚರಾಸ್ತಿ ನಷ್ಟವಾಗಿರುತ್ತದೆಂದು ಇನ್ನುಳಿದಂತೆ ಅಂದರೆ ಕೈಯಲ್ಲಿರುವ ರೂ 201/– ಅಧ್ಯಕ್ಷರು ಮತ್ತು ಕಾರ್ಯದರ್ಶಿ ಅಮಾನತ್ ರೂ 16,800/– ವ್ಯವಹಾರ ಅಮಾನತ್ ರೂ 1,669/– ಹಾಗೂ ಅಧ್ಯಕ್ಷರಿಂದ ವಸೂಲಿ ರೂ 1,330/– ಗಳನ್ನು ಒಳಗೊಂಡಂತೆ ಒಟ್ಟು ರೂ 20,000/– ವಸೂಲಾತಿ ಮಾಡಿ ಸರ್ಕಾರಿ ಸಾಲಕ್ಕೆ ಜಮಾ ಮಾಡಿದ್ದು, ಸಂಘಕ್ಕೆ ಬರತಕ್ಕ ಮೊತ್ತದ ಬಗ್ಗೆ ಮೇಲಿಂದ ಮೇಲೆ ಅಧ್ಯಕ್ಷರನ್ನು ಸಂಪರ್ಕಿಸಿ ಪಾವತಿ ಮಾಡಲು ಸೂಚಿಸಲಾಗಿರುವುದಾಗಿ, ಆದರೆ ಅಧ್ಯಕ್ಷರು ದಿನಾಂಕ:07.02.2011ರಂದು ಮೃತಪಟ್ಟಿರುವುದಾಗಿ ಮರಣ ಪ್ರಮಾಣ ಪತ್ರದ ದೃಢೀಕರಣವನ್ನು ಮತ್ತು ಸದರಿಯವರ ಹೆಸರಿನಲ್ಲಿ ಯಾವುದೇ ಸ್ಥಿರಾಸ್ತಿ ಇಲ್ಲವೆಂದು ಗ್ರಾಮಲೆಕ್ಕಾಧಿಕಾರಿ ಹಾಗೂ ತಹಸೀಲ್ದಾರರವರಿಂದ ದೃಢೀಕರಣ ಪತ್ರ ಪಡೆದು ಸಲ್ಲಿಸಿರುತ್ತಾರೆ.

ಸಂಘಕ್ಕೆ ಸರ್ಕಾರಿ ಸಾಲ ರೂ 25,000/– ಮಂಜೂರು ಆಗಿದ್ದು ಇದರಲ್ಲಿ ರೂ 2000/– ಚಲನ್ ನಂಬರ್ 1 ದಿನಾಂಕ:03.01.1998 ಮತ್ತು 20,000/– ಚಲನ್ ನಂಬರ್ 42, ದಿನಾಂಕ:27.01.2011 ರಂದು ಒಟ್ಟು 22,000/–ಗಳನ್ನು ಸರ್ಕಾರಕ್ಕೆ ಮರು ಪಾವತಿಸಿರುವುದಾಗಿ ತಿಳಿಸಿರುತ್ತಾರೆ. ಇದರಲ್ಲಿ ಬಾಕಿ ಸಾಲ ರೂ. 3000 ಹಾಗೂ ಬಡ್ಡಿ ರೂ. 64,880/– ಹಾಗೂ ಷೇರು ರೂ. 25,000/– ಒಟ್ಟು ರೂ 92,880/–ಗಳನ್ನು ಮನ್ನಾ ಮಾಡಲು ಕೋರಿರುತ್ತಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಇ 36 ಸಂಮಾಸ 2012, ಬೆಂಗಳೂರು ದಿನಾಂಕ:10.12.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಮಾಪನೆಗೊಂಡ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಶಿವಪುರ ತಾ:ಕೊಪ್ಪಳ ಇದರ ಸರ್ಕಾರಿ ಸಾಲ ರೂ 3,000/– ಬಡ್ಡಿ ರೂ 64,880/– ಮತ್ತು ಷೇರು ರೂ 25,000/– **ಹೀಗೆ ಒಟ್ಟು ರೂ 92,880/–(ರೂಪಾಯಿ ತೊಂಬತ್ತೇರಡು ಸಾವಿರ ಎಂಟುನೂರು ಎಂಬತ್ತು ಮಾತ್ರ)** ಮನ್ನಾ ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಆಇ 01 ಟಿಎಫ್‌ಪಿ 2002, ದಿನಾಂಕ:20.01.2003ರ ಹಾಗೂ ಸೇರ್ಪಡೆ ಆದೇಶ ಸಂಖ್ಯೆ:ಎಫ್‌ಡಿ 12 ಟಿಎಫ್‌ಪಿ 2007, ದಿನಾಂಕ:18.10.2007 ರನ್ವಯ ಸರ್ಕಾರದ ಕಾರ್ಯದರ್ಶಿ ರವರಿಗೆ ಪ್ರತ್ಯಾಯೋಜಿಸಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಹೆಚ್.ಎಸ್.ನಾಗರಾಜಯ್ಯ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ.

**PR.12**

**SC.50**

## ಸಹಕಾರ ಸಚಿವಾಲಯ

**ವಿಷಯ :** ಬಾಗಲಕೋಟೆ ಕೃಷಿಯೇತರ ಪತ್ತಿನ ಸಹಕಾರ ಸಂಘಗಳ ಒಕ್ಕೂಟ ನಿಯಮಿತ, ಬಾಗಲಕೋಟೆ ಇದಕ್ಕೆ ಮಂಜೂರಾಗಿರುವ ವಸೂಲಾಧಿಕಾರಿ ಹುದ್ದೆಯ ವೇತನ ವೆಚ್ಚ ಭರಿಸುವ ಸಲುವಾಗಿ ಸಂಗ್ರಹವಾಗುವ ಅಮಲ್ದಾರಿ ಶುಲ್ಕವನ್ನು ಸಂದಾಯ ಮಾಡುವಲ್ಲಿ ವಿನಾಯಿತಿ ನೀಡುವ ಕುರಿತು.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ:ಸಿಇ 170 ಸಿಎಲ್‌ಎಂ 2006, ದಿನಾಂಕ:24.09.2013

2) ಅಧ್ಯಕ್ಷರು, ಬಾಗಲಕೋಟ ಪತ್ತಿನ ಸಹಕಾರ ಸಂಘಗಳ ಒಕ್ಕೂಟ ನಿಯಮಿತ, ಇವರ ಪತ್ರ ಸಂಖ್ಯೆ:

3) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಸಿಬ್ಬಂದಿ/31/ಇಜಿಸಿ/ 2012-13, ದಿನಾಂಕ:19.06.2013

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜ್ಯ ಪಟ್ಟಣ ಸಹಕಾರ ಬ್ಯಾಂಕುಗಳ ಮಹಾಮಂಡಳಗಳಲ್ಲಿ ನಿಯಮ 441ರ ಮೇರೆಗೆ ನೇಮಿಸಿದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಅಮಲ್ದಾರಿ ಅರ್ಜಿಗಳಿಗೆ ಸಹಿ ಹಾಕಿದ ಸಂದರ್ಭದಲ್ಲಿ ಪಟ್ಟಣ ಸಹಕಾರ ಬ್ಯಾಂಕುಗಳ ನೌಕರರು ಮಾರಾಟಾಧಿಕಾರಿಯಾಗಿ ನೇಮಿಸಲ್ಪಟ್ಟು ಅಮಲ್ದಾರಿ ಕೈಗೊಂಡಾಗ ಸರ್ಕಾರಕ್ಕೆ ಶೇಕಡಾ 10ರಷ್ಟು ಮಹಾಮಂಡಳಕ್ಕೆ ಶೇಕಡಾ 20 ರಷ್ಟು ಮತ್ತು ಸಂಬಂಧಪಟ್ಟ ಪಟ್ಟಣ ಸಹಕಾರ ಬ್ಯಾಂಕುಗಳಿಗೆ ಶೇಕಡಾ 70ರಷ್ಟು ಹಂಚಿಕೆ ಮಾಡಿ ಆದೇಶ ಹೊರಡಿಸಲಾಗಿದೆ.

ಅಧ್ಯಕ್ಷರು, ಕೃಷಿಯೇತರ ಪತ್ತಿನ ಸಹಕಾರ ಸಂಘಗಳ ಒಕ್ಕೂಟ ನಿಯಮಿತ, ಬಾಗಲಕೋಟೆ ಇವರು ಮೇಲೆ ಓದಲಾದ (2)ರ ಪತ್ರದಲ್ಲಿ ವಸೂಲಾಧಿಕಾರಿಗಳ ಮತ್ತು ಮಾರಾಟಾಧಿಕಾರಿಗಳ ವೇತನ ವೆಚ್ಚ ಮತ್ತು ಭತ್ಯೆ ಭರಿಸುವ ಸಲುವಾಗಿ ಅಮಲ್ಜಾರಿ ಶುಲ್ಕವನ್ನು ಸಂದಾಯ ಮಾಡುವಲ್ಲಿ ವಿನಾಯಿತಿಗೆ ಸಂಬಂಧಿಸಿದಂತೆ ಒಕ್ಕೂಟವೇ ಮಾರಾಟಾಧಿಕಾರಿಗಳನ್ನು ನೇಮಿಸಿಕೊಂಡಲ್ಲಿ ಸರ್ಕಾರಕ್ಕೆ ಶೇಕಡಾ 10ರಷ್ಟು ಹಾಗೂ ಒಕ್ಕೂಟಕ್ಕೆ ಶೇಕಡಾ 90ರಷ್ಟು ಅಮಲ್ಜಾರಿ ಫೀ ಹಂಚಿಕೆಗಾಗಿ ಕೋರಿರುತ್ತಾರೆ.

ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ಇವರು ಮೇಲೆ ಓದಲಾದ (3)ರ ಪತ್ರದಲ್ಲಿ ಬಾಗಲಕೋಟೆ ಕೃಷಿಯೇತರ ಪತ್ತಿನ ಸಹಕಾರ ಸಂಘಗಳ ಒಕ್ಕೂಟ ನಿಯಮಿತ, ಬಾಗಲಕೋಟೆ ಈ ಒಕ್ಕೂಟವೇ ಮಾರಾಟಾಧಿಕಾರಿಗಳನ್ನು ನೇಮಿಸಿಕೊಂಡಲ್ಲಿ ಅಮಲ್ಜಾರಿ ಅರ್ಜಿಗಳಿಗೆ ಸಹಿ ಮಾಡಲು ಸಹಕಾರ ಸಂಘಗಳ ಸಹಾಯಕ ನಿಬಂಧಕರ ವೃಂದದ ಇಲಾಖೆಯ ಅಧಿಕಾರಿಯನ್ನು ನಿಯಮ 441ರಲ್ಲಿ ಪಡೆಯುವ ಷರತ್ತಿಗೊಳಪಟ್ಟು ಅಮಲ್ಜಾರಿ ಶುಲ್ಕ ಪಾವತಿಸುವಲ್ಲಿ ಶೇಕಡಾ 15ರಷ್ಟು ಸರ್ಕಾರಕ್ಕೆ ಮತ್ತು ಶೇಕಡಾ 85ರಷ್ಟು ಒಕ್ಕೂಟಕ್ಕೆ ಹಂಚಿಕೆ ಮಾಡಬಹುದೆಂದು ಶಿಫಾರಸ್ಸು ಮಾಡಿದ್ದಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯನ್ನು ಹಾಗೂ ಅಧ್ಯಕ್ಷರು, ಕೃಷಿಯೇತರ ಪತ್ತಿನ ಸಹಕಾರ ಸಂಘಗಳ ಒಕ್ಕೂಟ ನಿಯಮಿತ, ಬಾಗಲಕೋಟೆ ಇವರ ಪ್ರಸ್ತಾವೆಯನ್ನು ಪರಿಶೀಲಿಸಿ ಅಮಲ್ಜಾರಿ ಶುಲ್ಕವನ್ನು ಕೆಳಗಿನಂತೆ ಹಂಚಿಕೆ ಮಾಡುವುದು ಸೂಕ್ತವೆಂದು ತೀರ್ಮಾನಿಸಿದೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಇ 83 ಸಿಎಲ್‌ಎಂ 2013, ಬೆಂಗಳೂರು, ದಿನಾಂಕ:18.12.2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಅಮಲ್ಜಾರಿ ಅರ್ಜಿಗಳಿಗೆ ಸಹಿ ಮಾಡಲು ಸಹಕಾರ ಸಂಘಗಳ ಸಹಾಯಕ ನಿಬಂಧಕರ ವೃಂದದ ಇಲಾಖೆಯ ಅಧಿಕಾರಿಯನ್ನು ನಿಯಮ 441 ರಡಿಯಲ್ಲಿ ಪಡೆದುಕೊಳ್ಳುವ ಷರತ್ತಿಗೊಳಪಟ್ಟು ಅಮಲ್ಜಾರಿ ಶುಲ್ಕವನ್ನು ವಿಭಜಿಸಿ ಈ ಕೆಳಕಂಡಂತೆ ಹಂಚಿಕೆ ಮಾಡಲು ಮಂಜೂರಾತಿ ನೀಡಲಾಗಿದೆ.

ಶೇಕಡಾ 15 ರಷ್ಟು ಸರ್ಕಾರಕ್ಕೆ ಮತ್ತು ಶೇಕಡಾ 85 ರಷ್ಟು ಒಕ್ಕೂಟಕ್ಕೆ ಹಂಚಿಕೆ ಮಾಡಲಾಗಿದೆ.

ಈ ಹಂಚಿಕೆಯು ಮಹಾಮಂಡಳಿಯಲ್ಲಿ ನಿಯಮ 441ರಡಿ ಕಾರ್ಯನಿರ್ವಹಿಸುತ್ತಿರುವ ಸಹಕಾರ ಸಂಘಗಳ ಸಹಾಯಕ ನಿಬಂಧಕರುಗಳಿಗೆ ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆಯಲ್ಲಿ ನೀಡಲಾದ ಅಧಿಕಾರ ಪ್ರತ್ಯಾಯೋಜನೆ ಪರಿಣಾಮದಲ್ಲಿರುವವರೆಗೆ ಅಥವಾ ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಹೆಚ್.ಎಸ್.ನಾಗರಾಜಯ್ಯ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ.

**PR.13**

**SC.25**

## ಸಹಕಾರ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಸಹಕಾರ ಚುನಾವಣಾ ಆಯೋಗದ ಚಟುವಟಿಕೆಗಳಿಗಾಗಿ 2013-14ನೇ ಸಾಲಿಗೆ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಒ 70 ಸಿಎಲ್ಎಂ 2013, ದಿನಾಂಕ: 28.08.2013.

2) ಆಯುಕ್ತರು, ಕರ್ನಾಟಕ ರಾಜ್ಯ ಸಹಕಾರ ಚುನಾವಣಾ ಆಯೋಗ ಇವರ ಪತ್ರ ಸಂಖ್ಯೆ: ಸಚುಆ/ಲೆ.ಶಾ/5/2013-14, ದಿನಾಂಕ:06.11.2013

**ಪ್ರಸ್ತಾವನೆ:**

ಸರ್ಕಾರವು 2013-14ನೇ ಸಾಲಿನ ಆಯವ್ಯಯದಲ್ಲಿ ರೂ.300.00 ಲಕ್ಷಗಳ ಅನುದಾನವನ್ನು ಕರ್ನಾಟಕ ರಾಜ್ಯ ಸಹಕಾರ ಚುನಾವಣಾ ಆಯೋಗಕ್ಕೆ ಮಂಜೂರು ಮಾಡಿದ್ದು, ಈ ಪೈಕಿ ರೂ 150.00 ಲಕ್ಷಗಳನ್ನು ಮೊದಲನೆ ಹಾಗೂ ಎರಡನೆ ತ್ರೈಮಾಸಿಕ ಅನುದಾನವಾಗಿ ಮೇಲೆ ಓದಲಾದ (1)ರ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಆಯುಕ್ತರು, ಕರ್ನಾಟಕ ರಾಜ್ಯ ಸಹಕಾರ ಚುನಾವಣಾ ಆಯೋಗದ ಆಯುಕ್ತರು ದಿನಾಂಕ:06.11.2013ರ ಸಹಕಾರ ಚುನಾವಣಾ ಆಯೋಗದ ಯೋಜಿತ ಚಟುವಟಿಕೆಗಳು ಅನುಷ್ಠಾನಗೊಂಡಿದ್ದು, ಉಳಿದ ರೂ 150.00 ಲಕ್ಷಗಳನ್ನು ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 70 ಸಿಎಲ್ಎಂ 2013, ಬೆಂಗಳೂರು, ದಿನಾಂಕ: 09.12.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಸಹಕಾರ ಚುನಾವಣಾ ಆಯೋಗದ ಚಟುವಟಿಕೆಗಳಿಗಾಗಿ ಲೆಕ್ಕ ಶೀರ್ಷಿಕೆ 2425-00-004-0-03-051 (ಯೋಜನೆ) ಅಡಿ ಮೂರನೇ ತ್ರೈಮಾಸಿಕ ಕಂತಿನಲ್ಲಿ ರೂ.75.00 ಲಕ್ಷಗಳ (ಎಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಿ ಆದೇಶಿಸಿದೆ.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ಕೇಂದ್ರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 263 ವೆಚ್ಚ-2/2013, ದಿನಾಂಕ: 25.11.2013ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಹೆಚ್.ಎಸ್.ನಾಗರಾಜಯ್ಯ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ.

PR.11

SC.50

## ಸಹಕಾರ ಸಚಿವಾಲಯ

**ವಿಷಯ:** ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಲ್ಲಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಸಇ 72 ಅಂಆಸ(ಎ) 2013, ಬೆಂಗಳೂರು, ದಿನಾಂಕ: 02.04.2013 ಮತ್ತು 07.08.2013.
2. ಸರ್ಕಾರದ ಆದೇಶ ಸಂಖ್ಯೆ: ಸಿಒ 203 ಸಿಎಲ್ಎಸ್ 2012(ಭಾಗ) ದಿನಾಂಕ: 07.03.2013.
3. ಸರ್ಕಾರದ ಆದೇಶ ಸಂಖ್ಯೆ: ಸಿಒ 97 ಸಿಎಲ್ಎಸ್ 2013, ದಿನಾಂಕ: 31.05.2013.
4. ಸರ್ಕಾರದ ಆದೇಶ ಸಂಖ್ಯೆ: ಸಿಒ 97 ಸಿಎಲ್ಎಸ್ 2013, ದಿನಾಂಕ: 22.08.2013.
5. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಸಿಆರ್‌ಡಿ/ಸಿಎಬಿ-1/4/2013-14, ದಿನಾಂಕ: 25.09.2013.

**ಪ್ರಸ್ತಾವನೆ:**

ಸಹಕಾರ ಇಲಾಖೆಯ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಲ್ಲಿ 2013-14ನೇ ಸಾಲಿಗೆ ರೂ.30,000.00ಲಕ್ಷಗಳ ಆಯವ್ಯಯದ ಅವಕಾಶ ಕಲ್ಪಿಸಿದೆ.

ಮೇಲೆ ಓದಲಾದ(1)ರ ಸರ್ಕಾರದ ಆದೇಶದಲ್ಲಿ ಸಹಕಾರ ಇಲಾಖೆಯ ಮುಂದುವರಿದ ಯೋಜನೆಗಳಲ್ಲಿ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ(2)ರ ಆದೇಶದಲ್ಲಿ ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು ಶೇಕಡಾ 1 ಮತ್ತು 3ರ ಬಡ್ಡಿ ದರದಲ್ಲಿ ನೀಡಿದ ಸಾಲಗಳಿಗೆ 2012-13ನೇ ಸಾಲಿನಲ್ಲಿ ಬಡ್ಡಿ ಸಹಾಯಧನದ ಮೊತ್ತ ರೂ.39,204.41ಲಕ್ಷವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ(3)ರ ಆದೇಶದಲ್ಲಿ ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು ಶೇಕಡಾ 1 ಮತ್ತು 3ರ ಬಡ್ಡಿ ದರದಲ್ಲಿ ನೀಡಿದ ಸಾಲಗಳಿಗೆ 2012–13ನೇ ಸಾಲಿನಲ್ಲಿ ಬಡ್ಡಿ ಸಹಾಯಧನದ ಮೊತ್ತ ರೂ.7,500.00ಲಕ್ಷವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ(4)ರ ಆದೇಶದಲ್ಲಿ ಎರಡನೇ ಕಂತಿನಲ್ಲಿ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಲ್ಲಿ ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ಶೇಕಡಾ 1 ಮತ್ತು ಶೇಕಡಾ 3ರ ಬಡ್ಡಿ ದರದಲ್ಲಿ ನೀಡಿದ ಸಾಲಗಳ ಪೈಕಿ ವಸೂಲಾಗಿರುವ ಸಾಲಗಳ ಬಡ್ಡಿಯ ವ್ಯತ್ಯಾಸದ ಬಡ್ಡಿ ಸಹಾಯಧನದ ಮೊತ್ತ ರೂ.7,500.00 ಲಕ್ಷವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (5)ರ ಪ್ರಸ್ತಾವದಲ್ಲಿ ಸಹಕಾರ ಸಂಘಗಳ ನಿಬಂಧಕರು ಮೂರನೇ ಕಂತಿನಲ್ಲಿ ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ಶೇಕಡಾ 1 ಮತ್ತು 3ರ ಬಡ್ಡಿ ದರದಲ್ಲಿ ನೀಡಿದ ಸಾಲಗಳ ಪೈಕಿ ವಸೂಲಾಗಿರುವ ಸಾಲಗಳ ಬಡ್ಡಿಯ ವ್ಯತ್ಯಾಸದ ಸಹಾಯಧನ 18013.36ಲಕ್ಷಗಳನ್ನು "2425–00–107–2–41–106–ಸಹಾಯಧನ (ಯೋಜನೆ) ಬಿಡುಗಡೆ ಮಾಡಲು ಕೋರಿರುತ್ತಾರೆ.

ಆದುದರಿಂದ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 97 ಸಿಎಲ್ಎಸ್ 2013, ಬೆಂಗಳೂರು, ದಿನಾಂಕ: 24.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮೂರನೇ ತ್ರೈಮಾಸಿಕದಲ್ಲಿ ಮೂರನೇ ಕಂತಿನಲ್ಲಿ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಲ್ಲಿ ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ಶೇಕಡಾ 1 ಮತ್ತು ಶೇಕಡಾ 3ರ ಬಡ್ಡಿ ದರದಲ್ಲಿ ನೀಡಿದ ಸಾಲಗಳ ಪೈಕಿ ವಸೂಲಾಗಿರುವ ಸಾಲಗಳ ಬಡ್ಡಿಯ ವ್ಯತ್ಯಾಸದ ಬಡ್ಡಿ ಸಹಾಯಧನ ರೂ.62.75ಕೋಟಿಗಳನ್ನು ಲೆಕ್ಕಶೀರ್ಷಿಕೆ 2425–00–107–02–41–106 ಸಹಾಯಧನ (ಯೋಜನೆ) ಸಾಮಾನ್ಯ ಅಡಿ ಕೆಳಕಂಡಂತೆ ಬಿಡುಗಡೆ ಮಾಡಲಾಗಿದೆ.

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು(ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿ ಠೇವಣಿಸಿ, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡುವುದು ಮತ್ತು ಈ ಹಣವನ್ನು ಸಂಬಂಧಿಸಿದ ಫಲಾನುಭವಿಗಳ ಖಾತೆಗೆ ಕೂಡಲೇ ಬಿಡುಗಡೆ ಮಾಡಿ, ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಆಇ 241 ವೆಚ್ಚ–2/2013, ದಿನಾಂಕ: 23.10.2013ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.
**ಹೆಚ್.ಎಸ್.ನಾಗರಾಜಯ್ಯ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ.

**PR.1219**
**SC.25**

## ಸಹಕಾರ ಸಚಿವಾಲಯ

**ವಿಷಯ:** ರಾಜ್ಯದಲ್ಲಿ ಕೃಷಿ ಸಹಕಾರ ಸಂಘಗಳಿಂದ / ಬ್ಯಾಂಕುಗಳಿಂದ ರೈತರು ಪಡೆದ ಅಲ್ಪಾವಧಿ ಬೆಳೆ ಸಾಲ ಮನ್ನಾ – 2012 ಯೋಜನೆಯಡಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಒ 272 ಸಿಎಲ್ಎಸ್ 2012 ದಿನಾಂಕ: 23.08.2012.
2. ಸರ್ಕಾರದ ಆದೇಶ ಸಂಖ್ಯೆ: ಸಿಒ 272 ಸಿಎಲ್ಎಸ್ 2012(ಭಾ) ದಿನಾಂಕ: 30.11.2012, 05.02.2012, 07.03.2013, 23.03.2013 ಮತ್ತು 28.03.2013.
3. ಸರ್ಕಾರದ ಆದೇಶ ಸಂಖ್ಯೆ: ಸಿಒ 101 ಸಿಎಲ್ಎಸ್ 2013, ದಿನಾಂಕ: 27.05.2013, 22.06.2013 ಮತ್ತು 28.06.2013.
4. ಸರ್ಕಾರದ ಆದೇಶ ಸಂಖ್ಯೆ: ಸಿಒ 101 ಸಿಎಲ್ಎಸ್ 2013, ದಿನಾಂಕ: 28.06.2013 ಮತ್ತು 03.09.2013
5. ಸರ್ಕಾರದ ಆದೇಶ ಸಂಖ್ಯೆ: ಸಿಒ 101 ಸಿಎಲ್ಎಸ್ 2013, ದಿನಾಂಕ: 10.10.2013
6. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಸಿಎಸ್/ಸಿಆರ್‌ಡಿ/ಸಿಎಬಿ–1/30/2012–13, ದಿನಾಂಕ: 09.10.2013.

**ಪ್ರಸ್ತಾವನೆ:**

2013–14ನೇ ಸಾಲಿನ ಪರಿಷ್ಕೃತ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2425–00–107–2–46 ಸಾಲ ಮನ್ನಾ (ಯೋಜನೆ)ಯಡಿ ರೂ.148564.83 ಲಕ್ಷಗಳ ಒಟ್ಟು ಅವಕಾಶ ಕಲ್ಪಿಸಿದ್ದು ಅದರಲ್ಲಿ ಉಪ ಲೆಕ್ಕ ಶೀರ್ಷಿಕೆ 106–ಸಹಾಯಧನ ರೂ.123289.72ಲಕ್ಷ 422–ವಿಶೇಷ ಘಟಕ ಯೋಜನೆ ರೂ.15617.82 ಲಕ್ಷ, 423–ಗಿರಿಜನ ಉಪಯೋಜನೆ ರೂ.9657.29 ಲಕ್ಷ ಆಗಿರುತ್ತದೆ.

ಮೇಲೆ ಓದಲಾದ (1)ರ ಆದೇಶದಲ್ಲಿ ರಾಜ್ಯದ ರೈತರು ಕೃಷಿ ಸಹಕಾರ ಸಂಘಗಳಿಂದ / ಬ್ಯಾಂಕುಗಳಿಂದ ದಿನಾಂಕ: 01.08.2011 ರಿಂದ 25.07.2012ರ ವರೆಗೆ ಸಾಲ ಪಡೆದು ದಿನಾಂಕ: 25.07.2012ಕ್ಕೆ ಬಾಕಿ ಇರುವ ಬೆಳೆ ಸಾಲವನ್ನು ರೂ.25,000.00ವರೆಗೆ ಅಸಲು ಮತ್ತು ಅದಕ್ಕೆ ಸಂಬಂಧಪಟ್ಟ ಬಡ್ಡಿಯೊಂದಿಗೆ ಸಂಪೂರ್ಣ ಮನ್ನಾ ಮಾಡಲಾಗಿದೆ.

ಮೇಲೆ ಓದಲಾದ (2)ರ ಆದೇಶಗಳಲ್ಲಿ ರಾಜ್ಯದಲ್ಲಿ ಕೃಷಿ ಸಹಕಾರ ಸಂಘಗಳಿಂದ / ಬ್ಯಾಂಕುಗಳಿಂದ ರೈತರು ಪಡೆದ ಅಲ್ಪಾವಧಿ ಬೆಳೆ ಸಾಲ ಮನ್ನಾ – 2012 ಯೋಜನೆಯಲ್ಲಿ ಸಹಕಾರ ಸಂಘಗಳ ನಿಬಂಧಕರಿಂದ ಬಂದ ಪ್ರಸ್ತಾವಗಳಂತೆ 2012–13ನೇ ಸಾಲಿನಲ್ಲಿ ಒಟ್ಟು ರೂ.94,000.00ಲಕ್ಷಗಳನ್ನು ಬಿಡುಗಡೆ ಮಾಡಿದೆ.

ಮೇಲೆ ಓದಲಾದ (3)ರ ಆದೇಶಗಳಲ್ಲಿ ಸಾಲ ಮನ್ನಾ ಯೋಜನೆ–2012ರಲ್ಲಿ 2013–14ನೇ ಸಾಲಿಗೆ ಒದಗಿಸಿದ ಆಯವ್ಯಯ ರೂ.800.00ಕೋಟಿಗಳ ಪೈಕಿ ಮೊದಲನೇ ತ್ರೈಮಾಸಿಕದಲ್ಲಿ ಮೊದಲನೇ ಕಂತಿನಲ್ಲಿ ರೂ.20,000.00ಲಕ್ಷಗಳನ್ನು ಮತ್ತು ಎರಡನೇ ಕಂತಿನಲ್ಲಿ ರೂ.18,000.00 ಲಕ್ಷಗಳನ್ನು ಬಿಡುಗಡೆ ಮಾಡಿದೆ.

ಮೇಲೆ ಓದಲಾದ (4)ರ ಆದೇಶಗಳಲ್ಲಿ ಪರಿಷ್ಕೃತ ಆಯವ್ಯಯದಲ್ಲಿ ಅವಕಾಶವಿರುವ ರೂ.1,48,564.83 ಲಕ್ಷಗಳ ಪೈಕಿ ಎರಡನೇ ತ್ರೈಮಾಸಿಕದಲ್ಲಿ ಮೂರನೇ ಕಂತಿನಲ್ಲಿ ರೂ.32,690.00 ಲಕ್ಷ ಮತ್ತು ನಾಲ್ಕನೇ ಕಂತಿನಲ್ಲಿ ರೂ.13,363.47ಲಕ್ಷಗಳನ್ನು ಬಿಡುಗಡೆ ಮಾಡಿದೆ.

ಮೇಲೆ ಓದಲಾದ (5) ರ ಆದೇಶದಲ್ಲಿ ಐದನೇ ಕಂತಿನಲ್ಲಿ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನಿಂದ ಬಿಡುಗಡೆ ಮಾಡಿದ ರೂ.32,690.00 ಲಕ್ಷಗಳ ಮೊತ್ತಕ್ಕೆ ದಿನಾಂಕ: 11.07.2013 ರಿಂದ 22.08.2013ರ ಅವಧಿಗೆ ಶೇಕಡಾ 9ರ ಬಡ್ಡಿಯಲ್ಲಿ ರೂ.346.60 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಸಹಕಾರ ಸಂಘಗಳ ನಿಬಂಧಕರು ಓದಲಾದ (6)ರ ಪ್ರಸ್ತಾವದಲ್ಲಿ ಪುನರ್ ಪರಿಶೀಲನೆಗೆ ಒಟ್ಟು ಬಾಕಿ ಇದ್ದ ರೂ.111080.48 ಲಕ್ಷಗಳ ಬಿಲ್ಲುಗಳ ಪೈಕಿ ಈಗ ರೂ.29390.87 ಲಕ್ಷಗಳ ಬಿಲ್ಲುಗಳು ಪುನರ್ ಪರಿಶೀಲನೆಗೊಂಡಿದ್ದು, ರೂ.0.43 ಲಕ್ಷಗಳು ಅನರ್ಹವಾಗಿರುತ್ತವೆ ಹಾಗೂ ರೂ.29,390.45 ಲಕ್ಷಗಳು ಅರ್ಹವಾಗಿರುತ್ತವೆ. ಅರ್ಹವಿರುವ ಮೊತ್ತದ ಪೈಕಿ ಈಗಾಗಲೇ ರೂ.66.85 ಲಕ್ಷಗಳನ್ನು ಬಿಡುಗಡೆ ಮಾಡಿರುವುದರಿಂದ ಉಳಿದ ಮೊತ್ತ ರೂ.29,323.60 ಲಕ್ಷಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಆದುದರಿಂದ, ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 101 ಸಿಎಲ್‌ಎಸ್ 2013, ಬೆಂಗಳೂರು, ದಿನಾಂಕ: 24.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರೂ.29,323.60ಲಕ್ಷಗಳನ್ನು (ಎರಡುನೂರ ತೊಂಭತ್ತೂರು ಕೋಟಿ ಇಪ್ಪತ್ತಮೂರು ಲಕ್ಷದ ಅರವತ್ತು ಸಾವಿರ ರೂಪಾಯಿಗಳು ಮಾತ್ರ) ಪ್ರಾರಂಭದ ಶಿಲ್ಕು ಒಳಗೊಂಡಂತೆ ಈ ಹಿಂದೆ ಬಿಡುಗಡೆ ಮಾಡಲಾಗಿರುವ ಒಟ್ಟು ಹಣದಲ್ಲಿ ಕನಿಷ್ಠ 75ರಷ್ಟನ್ನು ಬಳಕೆ ಮಾಡಿಕೊಂಡ ನಂತರವೇ ಮುಂದಿನ ಪ್ರಸ್ತಾವೆಯನ್ನು ಸಲ್ಲಿಸುವ ಷರತ್ತಿಗೊಳಪಟ್ಟು ಆರನೇ ಕಂತಿನಲ್ಲಿ ಕೆಳಕಂಡಂತೆ ಬಿಡುಗಡೆ ಮಾಡಲಾಗಿದೆ.

**(ರೂ. ಲಕ್ಷಗಳಲ್ಲಿ)**

| | |
|---|---|
| ಲೆಕ್ಕಶೀರ್ಷಿಕೆ 2425–00–107–2–46–ಸಾಲ ಮನ್ನಾ–106 ಸಹಾಯಧನ | 26,731.43 |
| 422 ವಿಶೇಷ ಘಟಕ ಯೋಜನೆ | 1828.54 |
| 423 ಗಿರಿಜನ ಉಪಯೋಜನೆ | 763.63 |
| **ಒಟ್ಟು** | 29,323.60 |

ಈ ವೆಚ್ಚವನ್ನು 2013–14ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 2425–00–107–2–46–ಸಾಲ ಮನ್ನಾ–106 ಸಹಾಯಧನ(ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು(ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿ ಠೇವಣಿಸಿ, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡುವುದು ಮತ್ತು ಈ ಹಣವನ್ನು ಸಂಬಂಧಿಸಿದ ಫಲಾನುಭವಿಗಳ ಖಾತೆಗೆ ಕೂಡಲೇ ಬಿಡುಗಡೆ ಮಾಡಿ, ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 243 ವೆಚ್ಚ–2/2013, ದಿನಾಂಕ: 23.10.2013 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಹೆಚ್.ಎಸ್.ನಾಗರಾಜಯ್ಯ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ.

PR.1218

SC.25

## ಸಹಕಾರ ಸಚಿವಾಲಯ

**ವಿಷಯ :** ಪಿಕಾರ್ಡ್ ಬ್ಯಾಂಕುಗಳಿಂದ ಸಾಲ ಪಡೆದ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ರೈತರು ಸಾಲ ಮರುಪಾವತಿ ಮಾಡದೇ ಸುಸ್ತಿಯಾಗಿರುವ ಮೊತ್ತದ ಅಸಲನ್ನು ಮನ್ನಾ ಮಾಡುವ ಕುರಿತು.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಸಿಎಸ್/ ಎಲ್‌ಡಿಬಿ–2/101/2012–13, ದಿನಾಂಕ: 20.03.2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ದಿನಾಂಕ: 31.03.2012ರ ಅಂತ್ಯಕ್ಕೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ 25,866 ರೈತ ಸಾಲಗಾರರುಗಳಿಂದ ಸುಸ್ತಿ ಸಾಲದ ಮೊತ್ತದಲ್ಲಿ ಅಸಲಿನ ರೂ.3604.89 ಲಕ್ಷ ಮೊತ್ತವನ್ನು ಮನ್ನಾ ಮಾಡುವಂತೆ ಕಸ್ಕಾರ್ಡ್ ಬ್ಯಾಂಕಿನ ನಿರ್ದೇಶಕ ಮಂಡಳಿ ಸಭೆ ದಿನಾಂಕ: 19.03.2013ರಂದು ನಿರ್ಣಯಿಸಿರುತ್ತದೆ. ಅದರಂತೆ, ಅಸಲು ಮೊತ್ತವನ್ನು ಮನ್ನಾ ಮಾಡಿ ಬ್ಯಾಂಕಿಗೆ ಬಿಡುಗಡೆ

ಮಾಡಿದಲ್ಲಿ ಈ ಕೊಡುಗೆಯ ಫಲಾನುಭವಿಗಳು ಪಿಕಾರ್ಡ್ ಬ್ಯಾಂಕುಗಳಲ್ಲಿ ಹೊಂದಿರುವ ಸಾಲದ ಖಾತೆಗಳನ್ನು ಖೈದುಗೊಳಿಸಲಾಗುವುದರಿಂದ ಅವರುಗಳು ಹೊಸ ಕೃಷಿ ಸಾಲಗಳಿಗೆ ಅರ್ಹರಾಗಿ ಆರ್ಥಿಕವಾಗಿ ಪುನರುಜ್ಜೀವನವಾಗುವುದರಿಂದ ರೂ.3604.89 ಲಕ್ಷದ ಮೊತ್ತದ ಸಾಲವನ್ನು ಮನ್ನಾ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 235 ಸಿಎಲ್ಎಸ್ 2013, ಬೆಂಗಳೂರು, ದಿನಾಂಕ: 07.11.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪಿಕಾರ್ಡ್ ಬ್ಯಾಂಕುಗಳಿಂದ ಸಾಲ ಪಡೆದ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ 25,866 ರೈತ ಸಾಲಗಾರರುಗಳಿಂದ ಸುಸ್ತಿ ಸಾಲದ ಮೊತ್ತದಲ್ಲಿ ರೂ.3604.89 ಲಕ್ಷ ಅಸಲು ಮೊತ್ತವನ್ನು ಸುಸ್ತಿ ಕಂತುಗಳ ಮೇಲಿನ ಬಡ್ಡಿ ಮತ್ತು ಮುಂದುವರೆದ ಬಡ್ಡಿ ಮೊತ್ತವನ್ನು ಪಿಕಾರ್ಡ್ ಬ್ಯಾಂಕುಗಳು ಮತ್ತು ಕಸ್ಕಾರ್ಡ್ ಬ್ಯಾಂಕುಗಳು 50:50ರ ಅನುಪಾತದಲ್ಲಿ ಭರಿಸುವ ಈ ಕೆಳಕಂಡ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡಿ ಸಾಲ ಮನ್ನಾ ಮಾಡಿ ಆದೇಶಿಸಿದೆ.

1) ಯಶಸ್ವಿನಿ ಯೋಜನೆ (ಎಸ್‌ಸಿಪಿ ಮತ್ತು ಟಿಎಸ್‌ಪಿ)ಯಡಿ ಸಂಗ್ರಹವಾಗಿ ಲಭ್ಯವಿರುವ ರೂ.20.00 ಕೋಟಿ ಉಳಿತಾಯವನ್ನು ಬಳಸಿಕೊಳ್ಳುವುದು. ಉಳಿದ ಮೊತ್ತವನ್ನು ಪೂರಕ ಆಯವ್ಯಯದಲ್ಲಿ ಒದಗಿಸಲು ಪ್ರಸ್ತಾವೆ ಸಲ್ಲಿಸುವುದು
2) ಹಾಲಿ ಜಾರಿಯಲ್ಲಿರುವ ಸಾಲ ಮನ್ನಾ ಲೆಕ್ಕಶೀರ್ಷಿಕೆ 2425–00–107–2–46–106 ಈ ಯೋಜನೆಗೆ ಉಪಯೋಗಿಸಿಕೊಂಡು ಇದಕ್ಕಾಗಿ ಪ್ರತ್ಯೇಕ ಲೆಕ್ಕ ಖಾತೆಯನ್ನು ನಿರ್ವಹಿಸಲು ಅನುಷ್ಠಾನ ಸಂಸ್ಥೆ ಕ್ರಮವಿಡತಕ್ಕದ್ದು.
3) ಆಯವ್ಯಯದಲ್ಲಿ ಅಸಲು ಭಾಗವಾದ ರೂ.3604.89 ಲಕ್ಷವನ್ನು ಒದಗಿಸಬೇಕಾದರೆ ಪಿಕಾರ್ಡ್ / ಕಸ್ಕಾರ್ಡ್ ಬಡ್ಡಿ ಭಾಗವನ್ನು (ನಿಯಮಿತ + ಸುಸ್ತಿಯಾದ / ದಂಡ) ಪೂರ್ಣ ಮನ್ನಾ ಮಾಡಿದ ನಂತರ ಅಗತ್ಯ ಪ್ರಮಾಣ ಪತ್ರವನ್ನು ಒದಗಿಸುವ ಷರತ್ತಿಗೊಳಪಟ್ಟಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: **ಆಇ 230 ವೆಚ್ಚ–2/2013, ದಿನಾಂಕ: 10.10.2013**ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.
**ಹೆಚ್.ಎಸ್.ನಾಗರಾಜಯ್ಯ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ.

**PR.1217**
**SC.100**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಸುನೀಲ ಎಂ. ಜಮಖಂಡಿ, ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಕುಡಚಿ, ರಾಯಭಾಗ ತಾಲ್ಲೂಕು, ಬೆಳಗಾವಿ ಜಿಲ್ಲೆ, ಇವರನ್ನು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಉಲ್ಲೇಖ:** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಜಿ/ಜೆಂವಿ/ಜೆ/21/2011–12, ದಿನಾಂಕ: 03/09/2013

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 03/09/2013ರ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು, ಡಾ: ಸುನೀಲ ಎಂ. ಜಮಖಂಡಿ, ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಕುಡಚಿ, ರಾಯಭಾಗ ತಾಲ್ಲೂಕು, ಬೆಳಗಾವಿ ಜಿಲ್ಲೆ, ಇವರು ದಿನಾಂಕ: 08/02/2010 ರಂದು ಪ್ರಥಮವಾಗಿ ವೈದ್ಯಾಧಿಕಾರಿಗಳಾಗಿ ನೇಮಕಗೊಂಡಿರುತ್ತಾರೆ. ಸದರಿಯವರು ಆಸ್ಪತ್ರೆಯಲ್ಲಿ ಕರ್ತವ್ಯದ ವೇಳೆಯಲ್ಲಿ ಮದ್ಯಪಾನ ಸೇವಿಸಿ ರೋಗಿಗಳ ಜೊತೆ ಅನುಚಿತವಾಗಿ ವರ್ತಿಸುವುದಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರಿಂದ ದೂರುಗಳು ಬಂದಿದ್ದು, ಹಾಗೂ ಯಾವುದೇ ಮಾಸಿಕ ಸಭೆಗಳಿಗೆ ಹಾಜರಾಗದೆ ಇರುವುದು ಮತ್ತು ನೋಟಿಸ್ ಜಾರಿ ಮಾಡಿದರೂ ಸಹ, ಮನ್ನಣೆ ನೀಡದೆ ಇರುವುದನ್ನು ಮುಂದುವರೆಸಿರುತ್ತಾರೆ ಹಾಗೂ, ಮೇಲಾಧಿಕಾರಿಗಳು, ಮಾನಸಿಕ ಕಿರುಕುಳ ನೀಡುತ್ತಾರೆಂದು ಆರೋಪಿಸಿರುತ್ತಾರೆ. ಕಳೆದ ಎರಡು ವರ್ಷಗಳ ಅವಧಿಯಲ್ಲಿ ಸದರಿಯವರು ಕುಟುಂಬ ಕಲ್ಯಾಣ ಶಸ್ತ್ರಚಿಕಿತ್ಸೆಯ ತರಬೇತಿ ನೀಡಿದ್ದರೂ, ಸಹ ಯಾವುದೇ ಶಸ್ತ್ರಚಿಕಿತ್ಸೆಯನ್ನು ನಡೆಸದೆ ರಾಷ್ಟ್ರೀಯ ಕಾರ್ಯಕ್ರಮಗಳ ಪ್ರಗತಿ ಕುಂಠಿತಗೊಳ್ಳಲು ಕಾರಣರಾಗಿರುವುದು. ಮತ್ತು ಆಸ್ಪತ್ರೆಯ ಲೆಕ್ಕ ತಪಾಸಣೆಯಲ್ಲಿ ಲಭ್ಯವಿರುವ ಔಷಧಿಗಳನ್ನೇ ಹೆಚ್ಚಿನ ಹಣ ನೀಡಿ, ಖಾಸಗಿಯವರಿಂದ ನಿಯಮಬಾಹಿರವಾಗಿ ಖರೀದಿಸಿ ಸರ್ಕಾರಿ ಹಣವನ್ನು ದುರುಪಯೋಗಪಡಿಸಿಕೊಂಡಿರುವುದು ಹಾಗೂ ಎನ್.ಆರ್.ಹೆಚ್.ಎಂ. ಅಡಿಯಲ್ಲಿ ವೆಚ್ಚ ಮಾಡಿದ ಮೊತ್ತಕ್ಕೆ ಸರಿಯಾದ ಮಾಹಿತಿ ಒದಗಿಸಿಲ್ಲದ ಆರೋಪಕ್ಕೆ ಸಂಬಂಧಿಸಿದಂತೆ ದೋಷಾರೋಪಣಾ ಪಟ್ಟಿಯನ್ನು ವೈದ್ಯಾಧಿಕಾರಿಯವರಿಗೆ ಜಾರಿ ಮಾಡಿದ್ದು, ಸದರಿ ವೈದ್ಯಧಿಕಾರಿ ನೀಡಿದ್ದ ರಕ್ಷಣಾ ಹೇಳಿಕೆಯ ಅಂಶಗಳು ಸಮರ್ಪಕವಾಗಿಲ್ಲದೆ ಇರುವುದರಿಂದ, ರಕ್ಷಣಾ ಹೇಳಿಕೆಯನ್ನು ಒಪ್ಪದೆ, ಮುಖ್ಯ ಜಾಗ್ರತಾಧಿಕಾರಿಗಳು, ಜಾಗೃತಕೋಶರವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ವರದಿ ಸಲ್ಲಿಸಿದ್ದು, ಸದರಿ ವೈದ್ಯಾಧಿಕಾರಿಯವರ ವಿರುದ್ಧದ 5 ಆರೋಪಗಳು ಸಾಬೀತಾಗಿರುವುದಾಗಿ ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ. ಸದರಿಯವರು ಕಚೇರಿ ವೇಳೆಯಲ್ಲಿ ಮದ್ಯಪಾನ ಮಾಡಿರುವುದು ಗಂಭೀರ ಸ್ವರೂಪದ ದುರ್ನಡತೆಯಾಗಿದ್ದು ಹಾಗೂ ಸರ್ಕಾರಿ ಹಣದ ದುರುಪಯೋಗ ಪಡಿಸಿರುವುದು ಮತ್ತು ಸದರಿಯವರು ಖಾಯಂಪೂರ್ವ ಸೇವಾವಧಿಯಲ್ಲಿರುವಾಗಲೇ ಸರ್ಕಾರಿ ಸೇವೆಗೆ ತಕ್ಕುದಲ್ಲದ ರೀತಿಯಲ್ಲಿ ದುರ್ವರ್ತನೆ ಮತ್ತು ಕರ್ತವ್ಯಲೋಪ ಎಸಗಿರುವುದರಿಂದ, ಇವರು ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಅರ್ಹರಿರುವುದಿಲ್ಲವೆಂದು ಕಂಡು ಬಂದಿದ್ದು ಹಾಗೂ, ಖಾಯಂಪೂರ್ವ ಸೇವಾವಧಿಯು ಘೋಷಣೆಯಾಗದೆ ಇರುವುದರಿಂದ, ಸರ್ಕಾರಕ್ಕೆ ಅಗತ್ಯ ದಾಖಲೆಗಳನ್ನು ಸಲ್ಲಿಸಿ, ಇವರನ್ನು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಕೋರಿರುತ್ತಾರೆ.

ಪ್ರಸ್ತಾವನೆ ಮತ್ತು ಲಭ್ಯವಿರುವ ದಾಖಲೆಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ್ದು, ಡಾ: ಸುನೀಲ ಎಂ. ಜಮಖಂಡಿ, ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಕುಡಚಿ, ರಾಯಭಾಗ ತಾಲ್ಲೂಕು, ಬೆಳಗಾವಿ ಜಿಲ್ಲೆ, ಇವರು ಖಾಯಂಪೂರ್ವ ಸೇವಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸದಿರುವುದನ್ನು ಮನಗಂಡು, ಸದರಿಯವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿ ಹುದ್ದೆಗೆ ಸೂಕ್ತರಲ್ಲವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 55 ಎಂಎಸ್ಎ 2013, ಬೆಂಗಳೂರು, ದಿನಾಂಕ:26-10-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಡಾ: ಸುನೀಲ ಎಂ. ಜಮಖಂಡಿ, ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಕುಡಚಿ, ರಾಯಭಾಗ ತಾಲ್ಲೂಕು, ಬೆಳಗಾವಿ ಜಿಲ್ಲೆ, ಇವರನ್ನು ಖಾಯಂ ಪೂರ್ವ ಸೇವಾವಧಿಯನ್ನು ತೃಪ್ತಿಕರವಾಗಿ ಪೂರೈಸದಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಗಳು, 1977ರ ನಿಯಮ 6(1)(ಬಿ) ರ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ, ಮತ್ತು ಅವರ ಹೆಸರಿನಲ್ಲಿ,
**ಎಂ.ವಿಶ್ವನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**PR.1212**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಸಂಧ್ಯಾ ರಾಮಕೃಷ್ಣ ನಾಯ್ಕ, ವೈದ್ಯಾಧಿಕಾರಿಗಳು, ಪ್ರಾ.ಆ.ಕೇಂದ್ರ, ಹಾರವಾಡ,(ಪ್ರಸ್ತುತ ಪ್ರಾ.ಆ.ಕೇಂದ್ರ, ಹಟ್ಟಿಕೆರೆ) ಅಂಕೋಲಾ ತಾಲ್ಲೂಕು, ಉತ್ತರಕನ್ನಡ ಜಿಲ್ಲೆ ಇವರನ್ನು ಕರ್ತವ್ಯಲೋಪ ಆರೋಪಕ್ಕೆ ಸಂಬಂಧಿಸಿದಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ: ಡಿಪಿಜಿ/ ಬೆವಿ (1)/ಕಾ /11/2011-12, ದಿನಾಂಕ: 14/05/2013.

**ಪ್ರಸ್ತಾವನೆ:**

ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು, ಡಾ: ಸಂಧ್ಯಾ ರಾಮಕೃಷ್ಣ ನಾಯ್ಕ, ವೈದ್ಯಾಧಿಕಾರಿಗಳು, ಪ್ರಾ.ಆ.ಕೇಂದ್ರ, ಹಾರವಾಡ,(ಪ್ರಸ್ತುತ ಪ್ರಾ.ಆ.ಕೇಂದ್ರ, ಹಟ್ಟಿಕೆರೆ) ಅಂಕೋಲಾ ತಾಲ್ಲೂಕು, ಉತ್ತರಕನ್ನಡ ಜಿಲ್ಲೆ ಇವರು ಇ.ಎಂ.ಓ.ಸಿ ತರಬೇತಿ ಹೊಂದಿದ್ದರಿಂದ ತಾಲ್ಲೂಕು ಆಸ್ಪತ್ರೆ, ಅಂಕೋಲಾಕ್ಕೆ ನಿಯೋಜಿಸಲಾಗಿತ್ತು. ಇವರು ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ: 04/04/2011 ರಂದು ಬೆಳಿಗ್ಗೆ 5.30ರ ಸಮಯದಲ್ಲಿ ಹೆರಿಗೆ ನೋವಿನಿಂದ ಆಸ್ಪತ್ರೆಗೆ ಬಂದ ಗರ್ಭಿಣಿ ಶ್ರೀಮತಿ ದೇವಕಿ ರಾಮಾಗೌಡ, ಬೀರಗದ್ದೆ, ಅರಬೈಲ್, ಯಲ್ಲಾಪುರ ತಾಲ್ಲೂಕು ಇವರನ್ನು ಆಸ್ಪತ್ರೆಯಲ್ಲಿ ಯಾರು ವಿಚಾರಿಸದೆ ಬೆಳಿಗ್ಗೆ 9.00 ಗಂಟೆಗೆ ನರ್ಸ್‌ಗಳು ಅವರನ್ನು ಹೆರಿಗೆ ವಾರ್ಡಿಗೆ ಸೇರಿಸಿ ಹೆರಿಗೆ ನೋವಿನಿಂದ ಬಳಲುತ್ತಿದ್ದ ಕಾರಣ ಪದೇ ಪದೇ ದೂರವಾಣಿ ಮೂಲಕ ವೈದ್ಯರಿಗೆ ಕರೆ ಮಾಡಿದರೂ ಸ್ಪಂದಿಸದೆ ಬೆಳಿಗ್ಗೆ 11.00 ಗಂಟೆಯವರೆಗೂ ಕರ್ತವ್ಯಕ್ಕೆ ಹಾಜರಾಗದೇ, ಬಂದವರು ನೇರವಾಗಿ ಕಛೇರಿಗೆ ತೆರಳಿ ಗರ್ಭಿಣಿಯ ಸಂಬಂಧಿಕರು ಗಲಾಟೆ ಮಾಡಿದಾಗ ಬೆಳಿಗ್ಗೆ 11.30ರ ಸಮಯದಲ್ಲಿ ಹೆರಿಗೆ ವಾರ್ಡಿಗೆ ಬಂದು ಚಿಕಿತ್ಸೆ ನೀಡಿದ್ದು, ಗರ್ಭಿಣಿಯ ಸ್ಥಿತಿ ಉಲ್ಬಣಗೊಂಡಿದ್ದರಿಂದ ಬೇರೆ ಆಸ್ಪತ್ರೆಗೆ ಕರೆದುಕೊಂಡು ಹೋಗುವುದಾಗಿ ತಿಳಿಸಿ ಡಿಸ್‌ಚಾರ್ಜ್ ಮಾಡಲು ಗರ್ಭಿಣಿ ಮಹಿಳೆಯ ಕುಟುಂಬದವರು ಕೋರಿದರೂ ಡಿಸ್‌ಚಾರ್ಜ್ ಮಾಡದೆ ಮಹಿಳೆಯನ್ನು ಪರೀಕ್ಷಿಸಿ ಪ್ರಕರಣದ ಗಂಭೀರತೆಯನ್ನು ಅರಿತು ಕೂಡಲೇ ಸೂಕ್ತ ಕ್ರಮ ವಹಿಸದೆ ಸ್ವತ: ಹೆರಿಗೆ ಮಾಡಿದ್ದು, ಗರ್ಭಿಣಿಗೆ ರಕ್ತಸ್ರಾವವಾಗಿ ಸದರಿ ಗರ್ಭಿಣಿ ಮತ್ತು ಶಿಶು ಮರಣ ಸಂಭವಿಸಲು ಕಾರಣರಾಗಿದ್ದ ಆರೋಪದ ಮೇಲೆ ಸದರಿ ವೈದ್ಯಾಧಿಕಾರಿಯವರಿಗೆ ದಿನಾಂಕ: 04/11/2011 ರಂದು ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಲಾಗಿತ್ತು. ಅವರು ಸಲ್ಲಿಸಿದ ರಕ್ಷಣಾ ಹೇಳಿಕೆಯನ್ನು ಒಪ್ಪದೆ ಈ ಪ್ರಕರಣದ ಬಗ್ಗೆ ವಿಚಾರಣೆಯನ್ನು ನಡೆಸಲು ದಿನಾಂಕ: 22/06/2012 ರಂದು ಮುಖ್ಯ ಜಾಗೃತಾಧಿಕಾರಿಗಳು (ಜಾಗೃತಕೋಶ), ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದು, ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಸದರಿ ಆಪಾದಿತ ವೈದ್ಯಾಧಿಕಾರಿಯವರ ಮೇಲಿನ ಆರೋಪಗಳು ಸಾಬೀತಾಗಿರುತ್ತವೆಂದು ದಿನಾಂಕ: 25/10/2012 ರಂದು ವರದಿ ಸಲ್ಲಿಸಿದ್ದು, ಆ ವರದಿಯೊಂದಿಗೆ 2ನೇ ಕಾರಣ ಕೇಳುವ ಸೂಚನಾ ಪತ್ರವನ್ನು ಆಪಾದಿತರಿಗೆ ಜಾರಿಗೊಳಿಸಿದ್ದು, ದಿನಾಂಕ; 16/02/2013 ರಂದು ಆಪಾದಿತ ವೈದ್ಯಾಧಿಕಾರಿಯವರು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಇವುಗಳನ್ನು ಪರಿಶೀಲಿಸಿದ್ದು, ವಿಚಾರಣಾ ವರದಿಯನ್ನು ಒಪ್ಪಿ ಆರೋಪಿತ ವೈದ್ಯಾಧಿಕಾರಿಗಳಾದ ಡಾ: ಸಂಧ್ಯಾ ರಾಮಕೃಷ್ಣ ನಾಯ್ಕ ಇವರಿಗೆ ದಂಡನೆ ವಿಧಿಸಲು ಸರ್ಕಾರವನ್ನು ಕೋರಿರುತ್ತಾರೆ.

ಡಾ: ಸಂಧ್ಯಾ ರಾಮಕೃಷ್ಣ ನಾಯ್ಕ, ವೈದ್ಯಾಧಿಕಾರಿಗಳು, ಪ್ರಾ.ಆ.ಕೇಂದ್ರ, ಹಾರವಾಡ,(ಪ್ರಸ್ತುತ ಪ್ರಾ.ಆ.ಕೇಂದ್ರ, ಹಟ್ಟಿಕೆರೆ) ಅಂಕೋಲಾ ತಾಲ್ಲೂಕು, ಉತ್ತರಕನ್ನಡ ಜಿಲ್ಲೆ ಇವರು ದಿನಾಂಕ: 04/04/2011 ರಂದು ಗರ್ಭಿಣಿ ದೇವಕಿ ರಾಮಾಗೌಡ ಎಂಬುವವರಿಗೆ ಸೂಕ್ತ ಚಿಕಿತ್ಸೆ ನೀಡದೆ ಸದರಿ ಗರ್ಭಿಣಿ ಮತ್ತು ಶಿಶು ಮರಣ ಸಂಭವಿಸಲು ಕಾರಣರಾಗಿ ಕರ್ತವ್ಯಲೋಪ ಎಸಗಿರುವ ಆರೋಪಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸಿರುವ ವಿಚಾರಣಾಧಿಕಾರಿಗಳು ತಮ್ಮ ವಿಚಾರಣಾ ವರದಿಯಲ್ಲಿ "ಡಾ: ಸಂಧ್ಯಾ ಆರ್. ನಾಯ್ಕ, ವೈದ್ಯಾಧಿಕಾರಿಗಳು, ಪ್ರಾ.ಆ.ಕೇಂದ್ರ, ಹಾರವಾಡ, ಅಂಕೋಲಾ ತಾಲ್ಲೂಕು, ಕಾರವಾರ ಜಿಲ್ಲೆಯವರ ಮೇಲಿನ ಆರೋಪಗಳು ಸಾಬೀತಾಗಿರುತ್ತವೆ". ಎಂದು ನಿರ್ಣಯವನ್ನು ನೀಡಿದ್ದು, ಲಭ್ಯವಿರುವ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಡಾ: ಸಂಧ್ಯಾ ಆರ್. ನಾಯ್ಕ, ವೈದ್ಯಾಧಿಕಾರಿಗಳು ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವುದನ್ನು ಮನಗಂಡು, ವಿಚಾರಣಾ ವರದಿಯನ್ನು ಒಪ್ಪಿ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 211 ಎಂಎಸ್ಎ 2012 ಬೆಂಗಳೂರು ದಿನಾಂಕ: 30/10/2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಸಂಧ್ಯಾ ರಾಮಕೃಷ್ಣ ನಾಯ್ಕ, ವೈದ್ಯಾಧಿಕಾರಿಗಳು, ಪ್ರಾ.ಆ.ಕೇಂದ್ರ, ಹಾರವಾಡ,(ಪ್ರಸ್ತುತ ಪ್ರಾ.ಆ.ಕೇಂದ್ರ, ಹಟ್ಟಿಕೆರೆ) ಅಂಕೋಲಾ ತಾಲ್ಲೂಕು, ಉತ್ತರಕನ್ನಡ ಜಿಲ್ಲೆ ಇವರು ಕರ್ತವ್ಯ ಲೋಪವೆಸಗಿರುವುದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ವ.ನಿ. ಮತ್ತು ಮೇ.) ನಿಯಮಗಳು, 1957ರ ನಿಯಮ 8(**Viii**) ರ ಪ್ರಕಾರ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ, ಮತ್ತು ಅವರ ಹೆಸರಿನಲ್ಲಿ,
**ಎಂ.ವಿಶ್ವನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**PR.1211**

## FOREST, ECOLOGY AND ENVIRONMENT SECRETARIAT

**SUB:** Approval of criterion for allotment of jeeps / seats for wildlife safaris in Project Tiger Areas - reg.

**READ:** 1. Government Order No. FEE 38 FWL 2013 dated: 11.06.2013.

2. Letter No PCCF(WL)E/WL/TA/SC/CR-15/ 2012-13 dated: 25.05.2013 of The Principal Chief Conservator of Forests (Wildlife), Bangalore.

**PREAMABLE:**

In the Government Order dated: 11.06.2013 read at (1) above, the Government of Karnataka has modified the tourism policy of the state in Tiger Reserves /National Parks/Sanctuaries etc. in respect of carrying capacity of particular tourism zones by Jangle Lodges and Resorts and Private Resorts who are permitted.

In the letter dated: 25.05.2013 read at (2) above, the Principal Chief Conservator of Forests (Wildlife) has stated that the Karnataka Eco- tourism Development Board has conveyed the 2nd Executive Committee meeting on 13.03.2013 to discuss various issues relating to tourism activities mainely the issue relating to the criteria for allotment of jeeps/seats for wildlife safaris in the Tiger Reserves and approved the proposal placed before the Board Meeting.

Further, it was informed that with a view to avoid damage to the flora and fauna and the fragile eco-system of the area he proposed to develop a mechanism whereby the genuine Eco resorts are encouraged, at the same time commercial ones are not allowed to destroy the forest area. Keeping the carrying capacity of a forest area in view and in order to avoid pressure on the forests he proposed to regulate the entry of safari vehicles in the tourism areas. For the above mentioned purpose he suggested that a committee of experts will be constituted and this committee will evaluate the resort based on its experience of the resort, green practices followed, social concerns exhibited in its operations and it will award marks as per the following suggestions:-

| **CRITERION** | **MAX. MARKS** |
|---|---|
| 1. Number of years the resort has been in operation. | 20 |

(10 marks shall be allotted for all the resorts having held vehicle entry permission at any time in the past. In addition 0.5 marks will be allotted for every year of operation subject to a maximum of 10 marks).

| | |
|---|---|
| 2. Naturalists working with the resort. | 10 |

(2 marks shall be allotted for every “A grade” naturalist and 1 mark for every “B grade” naturalist as certified by the Forest Department. The Forest Department or its Agency shall conduct an exam based on which this gradation will be provided. The naturalist should have been working with the concerned resort for at least one year on the date of application to be eligible for consideration for this purpose).

| | |
|---|---|
| 3. Alternate energy use. | 10 |

(2 marks shall be awarded for every 10% requirement of the resort being fulfilled by alternate energy source. Maximum marks of 10 shall be awarded for fulfilling 50% or more energy requirement of the resort through non - conventional energy means. Alternate energy such as solar, wind, bio-gas etc., shall be considered for this purpose).

| | |
|---|---|
| 4. Employment to local communities. | 10 |

(Maximum marks of 10 shall be awarded for 90% or more local employees employed by the resort. On the other hand 0 or no marks shall be given for less than 50% local employees. Based on this formula for employing 50% local employees the resort will be eligible for 2 marks, 4 marks for 60% local employees..... and so on. Semi-skilled employees of the taluk shall be considered as local employees whereas for skilled employees district shall be the unit for consideration).

| | |
|---|---|
| 5. Number of rooms in the Resort. | 10 |

(Resorts having 40 or lesser number of beds (i.e., 20 rooms) shall be awarded the maximum marks of 10 in this category. For every additional 10 beds or part thereof 1 mark shall be deducted. This is to reward the resorts who have kept the carrying capacity and pressure on the forests in mind while constructing).

| | |
|---|---|
| 6. Activities for Forest Conservation and Local Community Development. | 20 |

(Actions of the resort towards the cause of conservation of forests including creating awareness in the tourists through high quality literature, media campaigns and films etc., will be considered. Similarly, Community Development Programmers in the area of education, health by the resorts shall also be considered. Setting up foundations or trusts for such causes will be awarded. Any recognised awards in the area of eco-tourism shall also be considered Criterion and marks shall be decided by the committee).

| | |
|---|---|
| 7. Resort Construction. | 10 |

(Marks shall be awarded based on design of the resort and use of local construction material. The committee will develop a criterion and award marks).

| | |
|---|---|
| 8. Other Green Practices. | 10 |

(This will include ban on plastics, noise pollution regulation, sewage and other solid waste disposal, wood for camp-fires and other such practices. The details and marking shall be decided by the committee).

| | |
|---|---|
| **TOTAL MARKS**. | **100** |

**Jeep Safari Allotment:**

Resorts shall be eligible for assured jeep safari allotment only if they obtain a minimum of 50 marks as per the above system. At 50 marks the resort will be eligible for one jeep. For every 10 additional marks the resort shall become eligible for an additional jeep safari i.e., if the resort obtains 60-69 marks they get 2 jeep safaris and for 70-79 marks they get three jeep safaris and so on subject to fulfilling certain other conditions being laid down by the Government. No resort owner shall be eligible for more than 80% of their bed capacity for the safari. For example, a home stay having 5 rooms may score 70 marks but their safari limit shall be fixed at 8 seats only. The jeeps provided by the Government Agency appointed by the Government shall be Eco-friendly of high quality well maintained and not larger than 12 seater.

In case the eligibility for safaris for all the resorts put together based on the above mentioned formula exceeds the carrying capacity of the area the allotment shall be reduced on a pro-rata basis.

**Conditions for the Allotment of Jeep Safaris.,**

a) The applicant should be a registered “Home Stay” or a Hotel or Resort with the State Tourism Department.
b) Obtaining all the statuary permissions and compliance to Government rules shall be a mandatory condition for anybody who applies for safari permission.
c) Payment of the cess, as proposed by Ministry of Environment and Forests, Government of India in the eco-tourism guidelines and as approved by the Government of Karnataka will have to be paid by the resort.
d) As per the eligibility Jeep safaris will be allotted. Resort owner shall have to pay the following Fee.,
    (i) pay the safari fee to the Government Agency operating the safari. This shall be for covering the operating costs and a small profit. The safari fee shall be fixed by the Government Agency operating the safaris in consultation with the Forest Department.
    (ii) in addition the user agency shall also pay the vehicle entry fee and the visitor entry fee as fixed by the Government.

Once allotted a safari the resort will have to pay the vehicle entry fees and a part of the safari fee even if they do not utilize the safari on any particular day. However, visitor entry fee will be paid as per actual usage.

e) Few jeeps shall be available for booking by the general public the resort owners can also book the same against confirmed booking by giving the names of the tourists.
f) New Resorts shall be considered only if a vacancy exists as per the Carrying capacity of the area or as and when a vacancy arises. This shall be done strictly on merit-cum-seniority basis. Merit being based on the above mentioned criterion whereas date of registration with the Karnataka Forest Department shall form the basis for seniority.
g) After allotment of the jeep safaris the allotment can be cancelled at any time if the resorts do not continue to fulfill all the criterion and conditions laid down by the Government.

The proposal of the principal Chief conservator of forest (Wildlife) was examined in detail. Accordingly, the Government order is issued as follow:-

**GOVERNMENT ORDER NO.FEE 169 FWL 2013, BANGALORE, DATED: 27/08/2013**

In the circumstances explained in the preamble, Government is pleased to approve the criterion for allotment of seats/Jeeps in Protected Tiger Areas as recommended by the Principal Chief Conservator of Forests(Wildlife), Bangalore. Further, with a view to avoid damage to the flora and fauna and the fragile eco-system of the area it is proposed to develop a mechanism keeping the carrying capacity of forest area in view and in order to avoid the pressure on the forest it is proposed to regulate the entry of safari vehicles in the tourism areas a committee of experts will be constituted and the committee will evaluate the resorts based on its experience of the resort, green practices followed, social concerns exhibited in its operations and shall award marks as per the following suggested as below:-

| | **CRITERION** | **MAX. MARKS** |
|---|---|---|
| 1. | Number of years the resort has been in operation. | 20 |

(10 marks shall be allotted for all the resorts having held vehicle entry permission at any time in the past. In addition 0.5 marks will be allotted for every year of operation subject to a maximum of 10 marks).

| | | |
|---|---|---|
| 2. | Naturalists working with the resort. | 10 |

(2 marks shall be allotted for every “A grade” naturalist and 1 mark for every “B grade” naturalist as certified by the Forest Department. The Forest Department or its Agency shall conduct an exam based on which this gradation will be provided. The naturalist should have been working with the concerned resort for at least one year on the date of application to be eligible for consideration for this purpose).

| | | |
|---|---|---|
| 3. | Alternate energy use. | 10 |

(2 marks shall be awarded for every 10% requirement of the resort being fulfilled by alternate energy source. Maximum marks of 10 shall be awarded for fulfilling 50% or more energy requirement of the resort through non -conventional energy means. Alternate energy such as solar, wind, bio-gas etc., shall be considered for this purpose).

4. Employment to local communities. 10

(Maximum marks of 10 shall be awarded for 90% or more local employees employed by the resort. On the other hand 0 or no marks shall be given for less than 50% local employees. Based on this formula for employing 50% local employees the resort will be eligible for 2 marks, 4 marks for 60% local employees..... and so on. Semi-skilled employees of the taluk shall be considered as local employees whereas for skilled employees district shall be the unit for consideration).

5. Number of rooms in the Resort. 10

(Resorts having 40 or lesser number of beds (i.e., 20 rooms) shall be awarded the maximum marks of 10 in this category. For every additional 10 beds or part thereof 1 mark shall be deducted. This is to reward the resorts who have kept the carrying capacity and pressure on the forests in mind while constructing).

6. Activities for Forest Conservation and Local Community Development. 20

(Actions of the resort towards the cause of conservation of forests including creating awareness in the tourists through high quality literature, media campaigns and films etc., will be considered. Similarly, Community Development Programmers in the area of education, health by the resorts shall also be considered. Setting up foundations or trusts for such causes will be awarded. Any recognised awards in the area of eco-tourism shall also be considered Criterion and marks shall be decided by the committee).

7. Resort Construction. 10

(Marks shall be awarded based on design of the resort and use of local construction material. The committee will develop a criterion and award marks).

8. Other Green Practices. 10

(This will include ban on plastics, noise pollution regulation, sewage and other solid waste disposal, wood for camp-fires and other such practices. The details and marking shall be decided by the committee).

**TOTAL MARKS**. **100**

**Jeep Safari Allotment:**

Resorts shall be eligible for assured jeep safari allotment only if they obtain a minimum of 50 marks as per the above system. At 50 marks the resort will be eligible for one jeep. For every 10 additional marks the resort shall become eligible for an additional jeep safari i.e., if the resort obtains 60-69 marks they get 2 jeep safaris and for 70-79 marks they get three jeep safaris and so on subject to fulfilling certain other conditions being laid down by the Government. No resort owner shall be eligible for more than 80% of their bed capacity for the safari. For example, a home stay having 5 rooms may score 70 marks but their safari limit shall be fixed at 8 seats only. The jeeps provided by the Government Agency appointed by the Government shall be Eco-friendly of high quality well maintained and not larger than 12 seater.

In case the eligibility for safaris for all the resorts put together based on the above mentioned formula exceeds the carrying capacity of the area the allotment shall be reduced on a pro-rata basis.

**Conditions for the Allotment of Jeep Safaris.,**

a) The applicant should be a registered "Home Stay" or a Hotel or Resort with the State Tourism Department.
b) Obtaining all the statuary permissions and compliance to Government rules shall be a mandatory condition for anybody who applies for safari permission.
c) Payment of the cess, as proposed by Ministry of Environment and Forests, Government of India in the eco-tourism guidelines and as approved by the Government of Karnataka will have to be paid by the resort.
d) As per the eligibility Jeep safaris will be allotted. Resort owner shall have to pay the following Fee.,
   i) pay the safari fee to the Government Agency operating the safari. This shall be for covering the operating costs and a small profit. The safari fee shall be fixed by the Government Agency operating the safaris in consultation with the Forest Department.
   ii) in addition the user agency shall also pay the vehicle entry fee and the visitor entry fee as fixed by the Government.

Once allotted a safari the resort will have to pay the vehicle entry fees and a part of the safari fee even if they do not utilize the safari on any particular day. However, visitor entry fee will be paid as per actual usage.

e) Few jeeps shall be available for booking by the general public the resort owners can also book the same against confirmed booking by giving the names of the tourists.
f) New Resorts shall be considered only if a vacancy exists as per the Carrying capacity of the area or as and when a vacancy arises. This shall be done strictly on merit-cum-seniority basis. Merit being based on the above mentioned criterion whereas date of registration with the Karnataka Forest Department shall form the basis for seniority.
g) After allotment of the jeep safaris the allotment can be cancelled at any time if the resorts do not continue to fulfill all the criterion and conditions laid down by the Government.

By Order and in the name of the Governor of Karnataka,

**S.P.PATIL**

Under Secretary to Government,
Forest, Ecology and Environment Department.
(Wildlife and Planning)

**PR.25**

**SC.600**

## ಆರ್ಥಿಕ ಸಚಿವಾಲಯ

**ಸಂಖ್ಯೆ: ಆಇ 26 ಮುಭನಿ 2013 ಬೆಂಗಳೂರು, ದಿನಾಂಕ: 30.09.2013.**

**ತಿದ್ದೋಲೆ**

ಸರ್ಕಾರಿ ಆದೇಶ ಸಂಖ್ಯೆ: ಆಇ 26 ಮುಭನಿ 2013 ದಿನಾಂಕ:20.08.2013ರಲ್ಲಿ ಪ್ರಸ್ತಾವನೆ ಭಾಗದ ಖಂಡಿಕೆ (3)ರ 2ನೇ ಸಾಲಿನಲ್ಲಿ ಹಾಗೂ ಆದೇಶ ಭಾಗದ 4ನೇ ಸಾಲಿನಲ್ಲಿ ಇರುವ ವೆಬ್‌ಸೈಟ್ ವಿಳಾಸ http://www.agkar.gov.in ಅಕ್ಷರಗಳ ಬದಲಾಗಿ http://www.agkar.cag.gov.in ಎಂದು ದಿನಾಂಕ:20.08.2013ರಿಂದಲೇ ಜಾರಿಗೆ ಬರುವಂತೆ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ**

**PR.1228** ಸರ್ಕಾರದ ಅಧೀನ ಕಾರ್ಯದರ್ಶಿ,

**SC.100** ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

## ಆರ್ಥಿಕ ಸಚಿವಾಲಯ

**ವಿಷಯ:** 2012–13ನೇ ಸಾಲಿನಿಂದ ಸಾಮಾನ್ಯ ಭವಿಷ್ಯ ನಿಧಿ ಖಾತೆಯಲ್ಲಿ ಜಮೆಯಾಗಿರುವ ಮೊತ್ತದ ವಿವರಗಳ ಮಾಹಿತಿಯನ್ನು ಖಾತೆದಾರರು ವೆಬ್‌ಸೈಟ್ ಮೂಲಕ ಪಡೆಯುವ ಬಗ್ಗೆ.

**ಓದಲಾಗಿದೆ:**
1. ಹಿರಿಯ ಉಪ ಮಹಾಲೇಖಪಾಲರು (ಫಂಡ್ಸ್)ರವರ ಅರೆ ಸರ್ಕಾರಿ ಪತ್ರ ಸಂಖ್ಯೆ: FM(C)/G3/2012-13/38, ದಿನಾಂಕ:09.01.2013.
2. ಸರ್ಕಾರದ ಪತ್ರ ಸಂಖ್ಯೆ: ಎಫ್.ಡಿ/1889/ಮುಂಗಡ/2013, ದಿನಾಂಕ:31.05.2013.
3. ಹಿರಿಯ ಉಪ ಮಹಾಲೇಖಪಾಲರು (ಫಂಡ್ಸ್)ರವರ ಪತ್ರ ಸಂಖ್ಯೆ: FM(C)/G1/ 2013-14/49, ದಿನಾಂಕ:19.06.2013.

**ಪ್ರಸ್ತಾವನೆ:**

ಮಾಹಿತಿ ಮತ್ತು ಸಂವಹನ ತಂತ್ರಜ್ಞಾನವನ್ನು (Information and Communication Technology) ಬಳಸಿ ರಾಜ್ಯ ಸರ್ಕಾರಿ ನೌಕರರ ಸಾಮಾನ್ಯ ಭವಿಷ್ಯ ನಿಧಿ ಖಾತೆಗಳ ಲೆಕ್ಕಗಳನ್ನು ಸಮರ್ಥವಾಗಿ ಮತ್ತು ಪಾರದರ್ಶಕವಾಗಿ ರೂಪಿಸಲು ಪೂರಕ ಕ್ರಮಗಳನ್ನು ಮಹಾಲೇಖಪಾಲರ ಕಛೇರಿಯು ಕೈಗೊಂಡಿದೆ. ಇದರ ಭಾಗವಾಗಿ ಸಾಮಾನ್ಯ ಭವಿಷ್ಯ ನಿಧಿ ಖಾತೆಯಲ್ಲಿ ಜಮೆಯಾಗಿರುವ ಮೊತ್ತದ ವಿವರಗಳನ್ನು ಒಳಗೊಂಡಿರುವ ವಾರ್ಷಿಕ ತಃಖ್ತೆಯನ್ನು ನೀಡುವ ಪ್ರಸ್ತುತ ಪದ್ಧತಿಯನ್ನು ಕೈಬಿಟ್ಟು, 2012–13ನೇ ಸಾಲಿನಿಂದ ಖಾತೆಯಲ್ಲಿ ಜಮೆಯಾಗಿರುವ ಮೊತ್ತದ ಮಾಹಿತಿಯನ್ನು ಖಾತೆದಾರರು ನೇರವಾಗಿ ವೆಬ್‌ಸೈಟ್ ಮೂಲಕ ಪಡೆಯುವ ಬಗ್ಗೆ ಸರ್ಕಾರದ ಅನುಮೋದನೆ ನೀಡುವಂತೆ ಮೇಲೆ ಕ್ರಸಂ (1)ರಲ್ಲಿ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ಕೋರಲಾಗಿದೆ.

ಸಾಮಾನ್ಯ ಭವಿಷ್ಯ ನಿಧಿ ಖಾತೆಯಲ್ಲಿ ಜಮೆಯಾಗಿರುವ ಮೊತ್ತದ ವಾರ್ಷಿಕ ತಃಖ್ತೆಯನ್ನು ನೀಡುವ ಪ್ರಸ್ತುತ ಪದ್ಧತಿಯನ್ನು ಕೈಬಿಟ್ಟು, ಈ ಮೊತ್ತದ ಮಾಹಿತಿಯನ್ನು 2012–13ನೇ ಸಾಲಿನಿಂದ ಖಾತೆದಾರರು ನೇರವಾಗಿ ವೆಬ್‌ಸೈಟ್ ಮೂಲಕ ಪಡೆದುಕೊಳ್ಳಲು ಸರ್ಕಾರ ನಿರ್ಣಯಿಸಿರುವ ಬಗ್ಗೆ ಮೇಲೆ ಕ್ರ.ಸಂ (2)ರಲ್ಲಿ ಓದಲಾದ ಸರ್ಕಾರಿ ಪತ್ರದಲ್ಲಿ ಮಹಾಲೇಖಪಾಲರ ಕಛೇರಿಗೆ ತಿಳಿಸಲಾಗಿದೆ.

ಸಾಮಾನ್ಯ ಭವಿಷ್ಯ ನಿಧಿ ಖಾತೆದಾರರು 2012–13ನೇ ಸಾಲಿನಿಂದ ಖಾತೆಯಲ್ಲಿ ಜಮೆಯಾಗಿರುವ ಮೊತ್ತದ ಬಗ್ಗೆ ಮಾಹಿತಿಯನ್ನು http://www.agkar.gov.in ವೆಬ್‌ಸೈಟ್‌ನಿಂದ download ಮಾಡಿಕೊಳ್ಳಲು ಅವಕಾಶವಿದೆಯೆಂದು ಮಹಾಲೇಖಪಾಲರ ಕಛೇರಿಯು ಮೇಲೆ ಕ್ರ.ಸಂ (3)ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಿರುತ್ತಾರೆ.

ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳು, 1957ರ ನಿಯಮ 30ರಲ್ಲಿ ಪ್ರತಿ ವರ್ಷ ಮುಕ್ತಾಯಗೊಂಡ ನಂತರ ಲೆಕ್ಕಾಧಿಕಾರಿಯು ಆದಷ್ಟು ಶೀಘ್ರವಾಗಿ ಪ್ರತಿಯೊಬ್ಬ ಚಂದಾದಾರನಿಗೆ ನಿಧಿಯಲ್ಲಿ ವರ್ಷದ 1ನೇ ಏಪ್ರಿಲ್‌ವರೆಗೆ ಇರುವ ಶಿಲ್ಕಿನ ಮೊಬಲಗು, ವರ್ಷದಲ್ಲಿ ಜಮೆ ಅಥವಾ ಕಳೆದುಕೊಂಡ ಒಟ್ಟು ಮೊಬಲಗು, ವರ್ಷದ 31ನೇ ಮಾರ್ಚ್‌ವರೆಗೆ ಜಮೆ ಮಾಡಲಾದ ಬಡ್ಡಿಯ ಒಟ್ಟು ಮೊಬಲಗನ್ನು ಮತ್ತು ಆ ದಿನಾಂಕದವರೆಗೆ ಮುಕ್ತಾಯದ ಶಿಲ್ಕನ್ನು ತೋರಿಸುವ ಅವರ ಖಾತೆಯ ವಿವರಣೆಗಳನ್ನು ಕಳುಹಿಸತಕ್ಕದ್ದೆಂದು ತಿಳಿಸಲಾಗಿದೆ.

ಸಾಮಾನ್ಯ ಭವಿಷ್ಯ ನಿಧಿ ಖಾತೆಯಲ್ಲಿ ಜಮೆಯಾಗಿರುವ ಮೊತ್ತದ ವಿವರಗಳನ್ನು ಒಳಗೊಂಡಿರುವ ವಾರ್ಷಿಕ ತಃಖ್ತೆಯನ್ನು ನೀಡುವ ಪ್ರಸ್ತುತ ಪದ್ಧತಿಯನ್ನು ಕೈಬಿಟ್ಟು, ಖಾತೆಯಲ್ಲಿ ಜಮೆಯಾಗಿರುವ ಮೊತ್ತದ ಬಗ್ಗೆ ಮಾಹಿತಿಯನ್ನು 2012–13ನೇ ಸಾಲಿನಿಂದ ಖಾತೆದಾರರು ನೇರವಾಗಿ ವೆಬ್‌ಸೈಟ್ ಮೂಲಕ ಪಡೆದುಕೊಳ್ಳಲು ಸರ್ಕಾರ ಈಗಾಗಲೇ ನಿರ್ಣಯಿಸಿರುವುದರಿಂದ ಈ ಮುಂದಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 26 ಮುಭನಿ 2013, ಬೆಂಗಳೂರು, ದಿನಾಂಕ:20.08.2013.**

ಸಾಮಾನ್ಯ ಭವಿಷ್ಯ ನಿಧಿ ಖಾತೆಯಲ್ಲಿ ಜಮೆಯಾಗಿರುವ ಮೊತ್ತದ ವಿವರಗಳನ್ನು ಒಳಗೊಂಡಿರುವ ವಾರ್ಷಿಕ ತಃಖ್ತೆಯನ್ನು ಮಹಾಲೇಖಪಾಲರ ಕಛೇರಿ ನೀಡುತ್ತಿರುವ ಪ್ರಸ್ತುತ ಪದ್ಧತಿಯನ್ನು ಕೈಬಿಟ್ಟು, ಖಾತೆಯಲ್ಲಿ ಜಮೆಯಾಗಿರುವ ಮೊತ್ತದ ಬಗ್ಗೆ ಮಾಹಿತಿಯನ್ನು 2012–13ನೇ ಸಾಲಿನಿಂದ ಖಾತೆದಾರರು ನೇರವಾಗಿ http://www.agkar.gov.in ವೆಬ್‌ಸೈಟ್ ಮೂಲಕ ಪಡೆದುಕೊಳ್ಳಲು ಸರ್ಕಾರ ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳು, 1957ಕ್ಕೆ ಅಗತ್ಯ ತಿದ್ದುಪಡಿ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ**

**PR.1225** ಸರ್ಕಾರದ ಅಧೀನ ಕಾರ್ಯದರ್ಶಿ,

**SC.100** ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

**ಆರ್ಥಿಕ ಸಚಿವಾಲಯ**

**ಸುತ್ತೋಲೆ**

**ಸಂಖ್ಯೆ: ಆಇ 26 ಮುಭನಿ 2013 ಬೆಂಗಳೂರು, ದಿನಾಂಕ:30.09.2013.**

**ವಿಷಯ:** ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿಗೆ ವಂತಿಗೆ ನೀಡುವುದನ್ನು ಕಡ್ಡಾಯಗೊಳಿಸುವ ಬಗ್ಗೆ

**ಉಲ್ಲೇಖ:** 1. ಅಧಿಸೂಚನೆ ಸಂಖ್ಯೆ:ಎಫ್.ಡಿ.48ಮುಭನಿ2001, ದಿ: 08.03.2002.

2. ಸರ್ಕಾರಿ ಆದೇಶ ಸಂಖ್ಯೆ:FD(SPL) 04 PET 2005, ದಿ:31.03.2006.

1. ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳು, 1957ಕ್ಕೆ ತಿದ್ದುಪಡಿ ಮಾಡಿ ಉಲ್ಲೇಖ (1)ರಲ್ಲಿನ ಅಧಿಸೂಚನೆ ಮೂಲಕ ದಿನಾಂಕ:01.06.2002ರಿಂದ ಜಾರಿಗೆ ಬರುವಂತೆ ಎಲ್ಲಾ ರಾಜ್ಯ ಸರ್ಕಾರಿ ನೌಕರರುಗಳು ಸಾಮಾನ್ಯ ಭವಿಷ್ಯ ನಿಧಿಗೆ ವಂತಿಗೆ ನೀಡುವುದು ಕಡ್ಡಾಯ ಮಾಡಲಾಗಿದೆ. ರಾಜ್ಯ ಸಿವಿಲ್ ಸೇವೆಗೆ ದಿನಾಂಕ:01.04.2006ರಿಂದ ಹೊಸದಾಗಿ ನೇಮಕಗೊಳ್ಳುವ ಸರ್ಕಾರಿ ನೌಕರರುಗಳಿಗೆ ನೂತನ ಪಿಂಚಣಿ ಯೋಜನೆಯ ಕಡ್ಡಾಯವಾಗಿರುವುದರಿಂದ ಸಾಮಾನ್ಯ ಭವಿಷ್ಯ ನಿಧಿಯ ಏರ್ಪಾಡುಗಳು ದಿನಾಂಕ:01.04.2006ರಂದು ಅಥವಾ ಅದರ ತರುವಾಯ ಸೇವೆಗೆ ಸೇರುವವರಿಗೆ ದೊರೆಯತಕ್ಕದ್ದಲ್ಲ ವೆಂದು ಉಲ್ಲೇಖ (2)ರಲ್ಲಿನ ಸರ್ಕಾರಿ ಆದೇಶದಲ್ಲಿ ಆದೇಶಿಸಲಾಗಿದೆ.

2. ಆದರೆ, ನೂತನ ಪಿಂಚಣಿ ಯೋಜನೆಯ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ನೌಕರರನ್ನು ಹೊರತುಪಡಿಸಿ ಉಳಿದ ರಾಜ್ಯ ಸರ್ಕಾರಿ ನೌಕರರುಗಳಿಗೆ ದಿನಾಂಕ:01.06.2002ರಿಂದ ಸಾಮಾನ್ಯ ಭವಿಷ್ಯ ನಿಧಿ ವಂತಿಕೆ ನೀಡುವುದು ಕಡ್ಡಾಯ ಮಾಡಲಾಗಿದ್ದರೂ ಸಹ, ಸಾಮಾನ್ಯ ಭವಿಷ್ಯ ನಿಧಿ ನಿಯಮಗಳಡಿ ಚಂದಾದಾರರಾಗಲೂ ಮಹಾಲೇಖಪಾಲರ ಕಛೇರಿಗೆ ಈಗಲೂ ಅರ್ಜಿಗಳು ಬರುತ್ತಿರುವುದಾಗಿ ಮಹಾಲೇಖಪಾಲರು ತಿಳಿಸಿರುತ್ತಾರೆ. ಅಂದರೆ, ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳು, 1957ರ ಪ್ರಕಾರ ರಾಜ್ಯ ಸರ್ಕಾರಿ ನೌಕರರು ಸಾಮಾನ್ಯ ಭವಿಷ್ಯ ನಿಧಿಗೆ ವಂತಿಕೆ ನೀಡುವುದು ಕಡ್ಡಾಯ ಮಾಡಲಾಗಿದ್ದರೂ ಸಹ, ವಂತಿಕೆಯನ್ನು ವೇತನದಿಂದ ಕಟಾಯಿಸದೇ, ಸರ್ಕಾರಿ ನೌಕರರಿಗೆ ವೇತನವನ್ನು ಪಾವತಿ ಮಾಡುತ್ತಿರುವ ಅಂಶವು ಹಾಗೂ ಇಂತಹ ಸುಮಾರು 57,000 ಸರ್ಕಾರಿ ನೌಕರರ ಪ್ರಕರಣಗಳಿವೆ ಎಂದು ಸರ್ಕಾರದ ಗಮನಕ್ಕೆ ಬಂದಿದೆ.

ಆದುದರಿಂದ ಎಲ್ಲಾ ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಗಳಿಗೆ (Drawing and Disbursing Officer) ಈ ಕೆಳಕಂಡ ಸೂಚನೆಯನ್ನು ನೀಡಲಾಗಿದೆ.

3. ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳು, 1957ರಡಿ ರಾಜ್ಯ ಸರ್ಕಾರಿ ನೌಕರರುಗಳಿಗೆ ದಿನಾಂಕ:01.06.2002ರಿಂದ ಸಾಮಾನ್ಯ ಭವಿಷ್ಯ ನಿಧಿ ವಂತಿಕೆ ನೀಡುವುದು ಕಡ್ಡಾಯ ಮಾಡಲಾಗಿರುವುದರಿಂದ, ನೂತನ ಪಿಂಚಣಿ ವ್ಯವಸ್ಥೆಯಡಿ ಬರುವ ಸರ್ಕಾರಿ ನೌಕರರುಗಳನ್ನು ಹೊರತುಪಡಿಸಿ, ತಮ್ಮ ವ್ಯಾಪ್ತಿಯಲ್ಲಿ ಬರುವ ಉಳಿದ ಎಲ್ಲಾ ಅಧಿಕಾರಿ/ಸಿಬ್ಬಂದಿಗಳ ವೇತನದಿಂದ ಸಾಮಾನ್ಯ ಭವಿಷ್ಯ ನಿಧಿ ವಂತಿಕೆ ಕಡಿತ ಮಾಡಲಾಗುತ್ತಿದೆಯೇ ಎಂದು ಪರಿಶೀಲಿಸುವುದು. ಯಾವುದೇ ಅಧಿಕಾರಿ/ಸಿಬ್ಬಂದಿ ಸಾಮಾನ್ಯ ಭವಿಷ್ಯ ನಿಧಿ ಚಂದಾದಾರನಾಗದಿದ್ದಲ್ಲಿ, ನಿಯಮ 5 ರಲ್ಲಿನ ಸಂಬಂಧಪಟ್ಟ ಅಧಿಕಾರಿ/ಸಿಬ್ಬಂದಿಗಳ ಗಮನಕ್ಕೆ ತಂದು, ನಿಯಮ 11ರಂತೆ ಕನಿಷ್ಠ ವಂತಿಕೆಯನ್ನು ಅಥವಾ ಸಂಬಂಧಪಟ್ಟ ನೌಕರರ ಇಚ್ಛಾನುಸಾರ ಹೆಚ್ಚಿನ ವಂತಿಕೆಯನ್ನು ನಿಯಮಾನುಸಾರ ಪಾವತಿಸಲು ಸಾಮಾನ್ಯ ಭವಿಷ್ಯ ನಿಧಿಗೆ ಪ್ರವೇಶ ಪಡೆಯಲು ಸೆಪ್ಟಂಬರ್ 2013ರೊಳಗೆ ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ಪಡೆದು ಮಹಾಲೇಖಪಾಲರ ಕಛೇರಿಗೆ ಅಗತ್ಯ ಕ್ರಮಕ್ಕಾಗಿ ಕಳುಹಿಸಿಕೊಡತಕ್ಕದ್ದು.

4. ರಾಜ್ಯ ಸಿವಿಲ್ ಸೇವೆಗೆ ದಿನಾಂಕ:01.04.2006ರಿಂದ ಹೊಸದಾಗಿ ನೇಮಕಗೊಳ್ಳುವ ಸರ್ಕಾರಿ ನೌಕರರುಗಳಿಗೆ ನೂತನ ಪಿಂಚಣಿ ಯೋಜನೆಯ ಕಡ್ಡಾಯವಾಗಿರುವುದರಿಂದ, ಈ ಸರ್ಕಾರಿ ನೌಕರರುಗಳಿಗೆ ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳು, 1957 ಅನ್ವಯವಾಗುವುದಿಲ್ಲ. ಎಲ್ಲಾ ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಗಳು ಅಕ್ಟೋಬರ್ 15, 2013ರೊಳಗೆ ಮೇಲಿನಂತೆ ಕ್ರಮ ಪೂರ್ಣಗೊಳಿಸತಕ್ಕದ್ದು. ತಪ್ಪಿದಲ್ಲಿ, ಸಂಬಂಧಪಟ್ಟ ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಗಳನ್ನು ಹೊಣೆಗಾರರನ್ನಾಗಿ ಮಾಡಲಾಗುವುದು.

5. ಎಲ್ಲಾ ಇಲಾಖಾ ಮುಖ್ಯಸ್ಥರುಗಳು ತಮ್ಮ ಇಲಾಖೆಯ ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಗಳು ಮೇಲಿನಂತೆ ಕಾಲಮಿತಿಯೊಳಗೆ ಕ್ರಮ ಕೈಗೊಂಡಿರುವುದನ್ನು ಖಚಿತಪಡಿಸಿಕೊಳ್ಳುವಂತೆ ಕೋರಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

**PR.1228**

ಸರ್ಕಾರಿ ಕೇಂದ್ರ ಮುದ್ರಣಾಲಯ, ಫಟಕ-2, ಬೆಂಗಳೂರು-59.